KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೩ | ಬೆಂಗಳೂರು, ಗುರುವಾರ, ಡಿಸೆಂಬರ್ ೧೮, ೨೦೦೮ (ಮಾರ್ಗಶಿರ ೨೭, ಶಕ ವರ್ಷ ೧೯೩೦) | ಸಂಚಿಕೆ ೫೦ |
|---|---|---|

## ಭಾಗ – ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

### ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು.

**ಪ್ರಕಟಣೆ**

**ಅಧಿಸೂಚನೆ ಸಂಖ್ಯೆ: ಬಿ12(3)ಪಿ.ಆರ್/07/07–08, ದಿನಾಂಕ: 06ನೇ ನವೆಂಬರ್ 2008**

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ವಿವಿಧ ಇಲಾಖೆಗಳಲ್ಲಿ ಈ ಕೆಳಗೆ ನಮೂದಿಸಿರುವ 'ಸಿ' ವೃಂದಗಳಲ್ಲಿರುವ ಖಾಲಿ ಹುದ್ದೆಗಳನ್ನು ಖಾಯಂ ಆಗಿ ಭರ್ತಿ ಮಾಡುವ ಬಗ್ಗೆ ಈ ಕೆಳಗೆ ನಮೂದಿಸಿರುವ ಷರತ್ತುಗಳು ಒಳಗೊಂಡಂತೆ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

ಅರ್ಹ ಅಭ್ಯರ್ಥಿಗಳು ಭರ್ತಿ ಮಾಡಿದ ಅರ್ಜಿಗಳನ್ನು ನಿಗದಿತ ನಮೂನೆಯಲ್ಲಿ ಎಲ್ಲಾ ವಿವರಗಳೊಂದಿಗೆ ಆಯುಕ್ತರು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಸಹಾಯಕ ಆಯುಕ್ತರು, (ನೇಮಕಾತಿ)ರವರ ಕಛೇರಿ, ಎನ್.ಆರ್.ಚೌಕ, ಬೆಂಗಳೂರು–2, **ದಿನಾಂಕ: 20–12–2008** ರಂದು ಅಥವಾ ಅದಕ್ಕೂ ಮುಂಚಿತವಾಗಿ ತಲುಪುವಂತೆ **ಅಂಚೆ ಅಥವಾ ಕೊರಿಯರ್ ಮೂಲಕ ಮಾತ್ರ ಕಳುಹಿಸುವುದು.** ಹುದ್ದೆಗಳ ಸಂಖ್ಯೆಯನ್ನು ಕಡಿಮೆ ಅಥವಾ ಹೆಚ್ಚು ಮಾಡುವುದಕ್ಕೆ ನಗರಪಾಲಿಕೆಯ ಆಯುಕ್ತರವರಿಗೆ ಅಧಿಕಾರವಿರುತ್ತದೆ. ಅರ್ಜಿಗಳನ್ನು ಮುದ್ದಾಂ ಸ್ವೀಕರಿಸಲಾಗುವುದಿಲ್ಲ.

**ಸೂಚನೆ : ದಿ:10–08–2007ರಂದು ಹೊರಡಿಸಲಾದ ಅಧಿಸೂಚನೆ ಬಿ12(3)ಪಿ.ಆರ್/07/07–08 ಯಲ್ಲಿ ಈಗಾಗಲೇ ಅರ್ಜಿ ಸಲ್ಲಿಸಿರುವ ಅಭ್ಯರ್ಥಿಗಳು ಮತ್ತೆ ಅರ್ಜಿ ಸಲ್ಲಿಸುವ ಅಗತ್ಯವಿರುವುದಿಲ್ಲ. ಹೆಚ್ಚುವರಿ ದಾಖಲೆಗಳನ್ನು ನೀಡಲು ಇಚ್ಛಿಸಿದಲ್ಲಿ ಅಂಚೆ ಮುಖಾಂತರ ಸಲ್ಲಿಸಬಹುದಾಗಿದೆ. ನಿಗದಿತ ವಿದ್ಯಾರ್ಹತೆ ಹೊಂದಿರುವ ಅಭ್ಯರ್ಥಿಗಳನ್ನು ಮೆರಿಟ್ ಲಿಸ್ಟ್‌ನಲ್ಲಿ ಸೇರಿಸಿಕೊಳ್ಳಲಾಗುವುದು.**

**ಹುದ್ದೆಗಳ ವಿವರ**

| ಕ್ರಮ ಸಂಖ್ಯೆ | ಹುದ್ದೆಯ ಹೆಸರು | ಒಟ್ಟು ಹುದ್ದೆ | ವಿದ್ಯಾರ್ಹತೆ | ವೇತನ ಶ್ರೇಣಿ |
|---|---|---|---|---|
| 1. | ಶೀಘ್ರಲಿಪಿಗಾರರು | 32 | 1. ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಉತ್ತೀರ್ಣ ಅಥವಾ ತತ್ಸಮಾನ ವಿದ್ಯಾರ್ಹತೆ.<br>2. ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯ ಕನ್ನಡ ಮತ್ತು ಆಂಗ್ಲ ಶೀಘ್ರಲಿಪಿ ಮತ್ತು ಬೆರಳಚ್ಚು ಪ್ರೌಢದರ್ಜೆಯಲ್ಲಿ ಉತ್ತೀರ್ಣರಾಗಿರಬೇಕು.<br>**ಅಥವಾ**<br>ತಾಂತ್ರಿಕ ಶಿಕ್ಷಣ ಇಲಾಖೆಯ ಅನುಮೋದಿತ ಡಿಎಸ್‌ಪಿ 3ನೇ ವರ್ಷದಲ್ಲಿ/4, 5 ಮತ್ತು 6ನೇ ಸೆಮಿಸ್ಟರ್‌ನಲ್ಲಿ ಕನ್ನಡ ಶೀಘ್ರಲಿಪಿ ಮತ್ತು ಬೆರಳಚ್ಚು ಅಥವಾ ಆಂಗ್ಲ ಶೀಘ್ರಲಿಪಿ ಮತ್ತು ಬೆರಳಚ್ಚು ವಿಷಯದಲ್ಲಿ ಉತ್ತೀರ್ಣ ಹಾಗೂ ಯಾವ ಭಾಷೆಯಲ್ಲಿ ಶೀಘ್ರಲಿಪಿ ಮತ್ತು ಬೆರಳಚ್ಚು ವಿಷಯಗಳನ್ನು ಅಭ್ಯಸಿಸಿರುವುದಿಲ್ಲವೋ ಅದನ್ನು ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯ ಪ್ರೌಢದರ್ಜೆಯ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.<br>ಕನ್ನಡ ಶೀಘ್ರಲಿಪಿಯಲ್ಲಿ ಪ್ರೊಫೀಷಿಯೆನ್ಸಿ ದರ್ಜೆಯ ಪರೀಕ್ಷೆಯಲ್ಲಿ ಉತ್ತೀರ್ಣರಾದ ಅಭ್ಯರ್ಥಿಗಳಿಗೆ ನಿಗದಿತ ವಿದ್ಯಾರ್ಹತೆಯಲ್ಲಿ ಗಳಿಸಿದ ಶೇಕಡಾವಾರು ಅಂಕಗಳಿಗೆ ಶೇ. 5 ರಷ್ಟು ಕೃಪಾಂಕವನ್ನು ಸೇರಿಸಲಾಗುವುದು. | 7275–13350 |

**ವರ್ಗೀಕರಣ:**

| ಕ್ರಮ ಸಂಖ್ಯೆ | ಹುದ್ದೆಯ ಹೆಸರು | ಒಟ್ಟು ಹುದ್ದೆ | ವರ್ಗೀಕರಣ | | | | | | | | |
|---|---|---|---|---|---|---|---|---|---|---|---|
| | | | | ಇತರೆ | ಮಹಿಳಾ | ಗ್ರಾಮೀಣ | ಮಾ.ಸೈ | ಕ.ಮಾ.ಅ | ಯೋ.ನಿರಾ | ಅಂ.ವಿ | ಒಟ್ಟು |
| 1. | ಶೀಘ್ರಲಿಪಿಗಾರರು | **32** | ಪ.ಜಾ | 02 | 01 | 01 | -- | -- | -- | -- | 04 |
| | | | ಪ.ಪಂ | -- | 01 | -- | -- | -- | -- | -- | 01 |
| | | | ಪ್ರ-1 | -- | 01 | -- | -- | -- | -- | -- | 01 |
| | | | ಪ್ರ-2(ಎ) | 02 | 01 | 02 | -- | -- | -- | -- | 05 |
| | | | ಪ್ರ-2(ಬಿ) | -- | 01 | -- | -- | -- | -- | -- | 01 |
| | | | ಪ್ರ-3(ಎ) | 01 | 01 | -- | -- | -- | -- | -- | 02 |
| | | | ಪ್ರ-3(ಬಿ) | 01 | 01 | -- | -- | -- | -- | -- | 02 |
| | | | ಸಾ.ಅ | 03 | 04 | 04 | 02 | 01 | 01 | 01 | 16 |
| | | | ಹುದ್ದೆಗಳ ವರ್ಗೀಕರಣದ ರೋಸ್ಟರಿನ ಪ್ರಾರಂಭಿಕ ಬಿಂದು : **17** | | | | | | | | |

1) ಮಾ.ಸೈ -- ಮಾಜಿ ಸೈನಿಕರು 2) ಕ.ಮಾ.ಅ -- ಕನ್ನಡ ಮಾಧ್ಯಮ ಅಭ್ಯರ್ಥಿ 3) ಯೋ.ನಿರಾ -- ಯೋಜನಾ ನಿರಾಶ್ರಿತರು 4) ಅಂ.ವಿ – ಅಂಗವಿಕಲರು

**ಅಭ್ಯರ್ಥಿಗಳಿಗೆ ಸೂಚನೆ ಮತ್ತು ಷರತ್ತುಗಳು:–**

**(ಎಲ್ಲಾ ಹುದ್ದೆಗಳಿಗೂ ಅನ್ವಯಿಸುತ್ತದೆ)**

1. **ಅರ್ಜಿಗಳನ್ನು ಅಂಚೆ ಅಥವಾ ಕೊರಿಯರ್ ಮೂಲಕ ಮಾತ್ರ ಕಳುಹಿಸತಕ್ಕದ್ದು. ಖುದ್ದಾಗಿ ಸ್ವೀಕರಿಸಲಾಗುವುದಿಲ್ಲ.**
2. **ವಯೋಮಿತಿ:** ಅರ್ಜಿ ಸಲ್ಲಿಸಲು ಕೊನೆಯ ದಿನಾಂಕದಂದು ಕೆಳಕಂಡ ವಯೋಮಿತಿ ಹೊಂದಿರತಕ್ಕದ್ದು

ಪ.ಜಾ/ಪ.ಪಂ, ಪ್ರವರ್ಗ–1 : ಕನಿಷ್ಠ–18, ಗರಿಷ್ಠ – 38 ವರ್ಷಗಳು

ಹಿಂದುಳಿದ ವರ್ಗ : ಕನಿಷ್ಠ –18, ಗರಿಷ್ಠ – 36 ವರ್ಷಗಳು

ಸಾಮಾನ್ಯ ವರ್ಗ : ಕನಿಷ್ಠ –18, ಗರಿಷ್ಠ – 33 ವರ್ಷಗಳು

ಈ ಕೆಳಗಿನ ಸಂದರ್ಭಗಳಲ್ಲಿ ನೇಮಕಾತಿಯ ಗರಿಷ್ಠ ವಯೋಮಿತಿಯನ್ನು ಕೆಳಗೆ ತಿಳಿಸಿರುವಷ್ಟರ ಮಟ್ಟಿಗೆ ಹೆಚ್ಚಿಸಲಾಗುವುದು.

ಅ) ಅಭ್ಯರ್ಥಿಯು ಕರ್ನಾಟಕ ರಾಜ್ಯ ಸರ್ಕಾರದಲ್ಲಿ ಅಥವಾ ಸ್ಥಳೀಯ ಪ್ರಾಧಿಕಾರದಲ್ಲಿ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಯಾದ ಅಥವಾ ರಾಜ್ಯ ಅಧಿನಿಯಮದ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಗೊಂಡು ಕರ್ನಾಟಕ ರಾಜ್ಯ ಸರ್ಕಾರದ ಸ್ವಾಮ್ಯ ಅಥವಾ ನಿಯಂತ್ರಣದಲ್ಲಿರುವ ನಿಗಮದಲ್ಲಿ ಹುದ್ದೆ ಹೊಂದಿರುವ ಅಥವಾ ಹಿಂದೆ ಹೊಂದಿದ್ದಲ್ಲಿ ಗರಿಷ್ಠ ವಯೋಮಿತಿಯನ್ನು ಅವನು/ಅವಳು ಎಷ್ಟು ವರ್ಷಗಳ ಅವಧಿಗೆ ಆ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವರೋ ಅಥವಾ ಹಿಂದೆ ಸಲ್ಲಿಸಿದ್ದರೋ ಅಷ್ಟು ವರ್ಷಗಳು ಅಥವಾ 10 ವರ್ಷಗಳ ಅವಧಿ ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.

ಆ) ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ ಅವನು ಕೇಂದ್ರ ಸಶಸ್ತ್ರ ದಳದಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಅಷ್ಟು ವರ್ಷಗಳಿಗೆ ಮೂರು ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳು.

ಇ) ಅಭ್ಯರ್ಥಿಯು ಅಂಗವಿಕಲನಾಗಿದ್ದರೆ 10 ವರ್ಷಗಳು.

ಈ) ಅಭ್ಯರ್ಥಿಯು ವಿಧವೆಯಾಗಿದ್ದಲ್ಲಿ 10 ವರ್ಷಗಳು.

3. ಅಭ್ಯರ್ಥಿಗಳಿಗೆ ಕನ್ನಡ ಭಾಷಾ ಜ್ಞಾನದ ಅವಶ್ಯಕತೆ ಕಡ್ಡಾಯವಾಗಿರುತ್ತದೆ.
4. ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಮಾತ್ತ ಅರ್ಜಿ ಸಲ್ಲಿಸಬೇಕು. ಅರ್ಜಿಯನ್ನು ಪಾಲಿಕೆಯ ವೆಬ್‌ಸೈಟ್ **www.bmponline.org ಯಿಂದ Download ಮಾಡಿಕೊಳ್ಳುವುದು. ಅರ್ಜಿಗಳನ್ನು ಪಾಲಿಕೆಯಿಂದ ಒದಗಿಸಲಾಗುವುದಿಲ್ಲ.** ಲಕೋಟೆಯ ಮೇಲೆ ಅರ್ಜಿ ಸಲ್ಲಿಸುವ ಹುದ್ದೆಯ ಹೆಸರು ನಮೂದಿಸಿರಬೇಕು.
5. ನಿಗದಿತ ದಿನಾಂಕದ ನಂತರ ಸಲ್ಲಿಸಿದ ಅರ್ಜಿಯನ್ನು ಪರಿಗಣಿಸಲಾಗುವುದಿಲ್ಲ.
6. ಸರ್ಕಾರಿ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವ ಅಭ್ಯರ್ಥಿಗಳು ಅರ್ಜಿಯನ್ನು ನೇಮಕಾತಿ ಪ್ರಾಧಿಕಾರ / ಇಲಾಖಾ ಮುಖ್ಯಸ್ಥರ ಮುಖಾಂತರ ಅರ್ಜಿಯನ್ನು ಸಲ್ಲಿಸುವುದು.
7. ಅಭ್ಯರ್ಥಿಯು ತನ್ನ ಇತ್ತೀಚಿನ ಭಾವಚಿತ್ರವೊಂದನ್ನು ಅರ್ಜಿಯ ಬಲಗಡೆ ಮೇಲ್ಭಾಗದಲ್ಲಿ ಅಂಟಿಸಬೇಕು.
8. ಅಭ್ಯರ್ಥಿಗಳ ಆಯ್ಕೆ ಬಗ್ಗೆ ಪ್ರಚಾರ ಅಥವಾ ಶಿಫಾರಸ್ಸುಗಳನ್ನು ಮಾಡಿದರೆ ಅಂಥವರ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
9. ಅರ್ಜಿದಾರರೊಡನೆ ಪತ್ರ ವ್ಯವಹಾರಕ್ಕೆ ಅವಕಾಶವಿರುವುದಿಲ್ಲ.
10. ಒಂದಕ್ಕಿಂತ ಹೆಚ್ಚು ಹುದ್ದೆಗೆ ಅರ್ಜಿಯನ್ನು ಸಲ್ಲಿಸಬಯಸುವ ಅಭ್ಯರ್ಥಿಗಳು ಪ್ರತ್ಯೇಕ ಹುದ್ದೆಗೆ ಪ್ರತ್ಯೇಕ ಅರ್ಜಿಯನ್ನು ದಾಖಲೆಗಳೊಂದಿಗೆ ಸಲ್ಲಿಸತಕ್ಕದ್ದು.

11. ಜಾತಿ ಅಡಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳು ಜಾತಿ ಪ್ರಮಾಣ ಪತ್ರದ ಬಗ್ಗೆ ಜಿಲ್ಲಾಧಿಕಾರಿಗಳು (ಅಧ್ಯಕ್ಷರು ಮತ್ತು ಜಾತಿ ಆದಾಯ ಪರಿಶೀಲನಾ ಸಮಿತಿ) ರವರಿಂದ ಸಿಂಧುತ್ವ ಪ್ರಮಾಣ ಪತ್ರ ಪಡೆದ ನಂತರ ನೇಮಕಾತಿ ಆದೇಶ ನೀಡಲಾಗುವುದು.
12. ಮೇಲಿನ ಹುದ್ದೆಗಳಿಗೆ ನೇಮಕಾತಿ ಬಗ್ಗೆ ಅಂತಿಮ ತೀರ್ಮಾನವನ್ನು ನೇಮಕಾತಿ ಪ್ರಾಧಿಕಾರಿಯಾದ ಆಯುಕ್ತರು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು ರವರು ಕಾಯ್ದಿರಿಸಿಕೊಂಡಿರುತ್ತಾರೆ.
13. ಪ.ಜಾತಿ/ಪ.ಪಂಗಡ ಮತ್ತು ಪ್ರವರ್ಗ–1 ಅಭ್ಯರ್ಥಿಗಳು ರೂ.50/– ಹಾಗೂ ಇತರರಿಗೆ ರೂ.100/– ಗಳಿಗೆ **ಬ್ಯಾಂಕ್ ಡಿ.ಡಿ.ಯನ್ನು ಆಯುಕ್ತರು, ಬೆಂಗಳೂರು ಮಹಾನಗರ ಪಾಲಿಕೆ, ಎನ್.ಆರ್.ಚೌಕ. ಬೆಂಗಳೂರು–560002** ರವರ ಹೆಸರಿಗೆ ಪಡೆದು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು ಮತ್ತು ಡಿ.ಡಿ. ಗಳನ್ನು ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕುಗಳಲ್ಲಿ ಮಾತ್ರ ಖರೀಧಿಸತಕ್ಕದ್ದು **ಹಾಗೂ ಡಿ.ಡಿ.ಯ ಹಿಂದೆ ಹೆಸರು ಮತ್ತು ವಿಳಾಸವನ್ನು ನಮೂದಿಸತಕ್ಕದ್ದು**. ಡಿ.ಡಿ.ಗಳನ್ನು ಲಗತ್ತಿಸದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
14. ಸಹಿ ಮಾಡದಿರುವ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.
15. **ಆಯ್ಕೆಯನ್ನು ಅಭ್ಯರ್ಥಿಯ ಮೆರಿಟ್ ಆಧಾರದ ಮೇಲೆ ಮಾತ್ರ ಪರಿಗಣಿಸಲಾಗುವುದು.**
16. **ಅಂಚೆ ವಿಳಂಬಕ್ಕೆ ಪಾಲಿಕೆಯು ಜವಾಬ್ದಾರರಾಗುವುದಿಲ್ಲ.**
17. **ಜಾತಿ / ಮೀಸಲಾತಿ ಪ್ರಮಾಣ ಪತ್ರಗಳು**

ಮೀಸಲಾತಿ ಸೌಲಭ್ಯ ಅಪೇಕ್ಷಿಸುವ ಅಭ್ಯರ್ಥಿಗಳು ಈ ಕೆಳಕಂಡ ದಾಖಲೆಗಳ ಪ್ರತಿಗಳನ್ನು ಅರ್ಜಿ ಸಲ್ಲಿಸುವ ದಿನಾಂಕದಂದು ನಿಗದಿತ ನಮೂನೆಯಲ್ಲಿ ಸಂಬಂಧಪಟ್ಟ ರೆವಿನ್ಯೂ ಪ್ರಾಧಿಕಾರದಿಂದ ಪಡೆದು ಲಗತ್ತಿಸಬೇಕು. ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಿ ಅವರ ಅಭ್ಯರ್ಥಿತನವನ್ನು ನಿಯಮಾನುಸಾರ ಸಾಮಾನ್ಯ ಅರ್ಹತೆಯಡಿಯಲ್ಲಿ ಪರಿಗಣಿಸಲಾಗುವುದು.

- ಪ.ಜಾ/ಪ.ಪಂ, ಪ್ರವರ್ಗ–1 : ಸರ್ಕಾರದ ಅಧಿಸೂಚನೆ SWD.132.SAD 97 dt:8.02.2000 ಕ್ರಮವಾಗಿ ನಮೂನೆ–1 ಹಾಗೂ 2.
- ಪ್ರವರ್ಗ2ಎ, 2ಬಿ, 3ಎ, 3ಬಿ : ಸರ್ಕಾರದ ಅಧಿಸೂಚನೆ SWD 126 BCA dt:13.12.2003 (ಕರ್ನಾಟಕ ಅನುಸೂಚಿತ ಜಾತಿಗಳು, ಅನುಸೂಚಿತ ಬುಡಕಟ್ಟುಗಳು ಮತ್ತು ಹಿಂದುಳಿದ ವರ್ಗಗಳ (ನೇಮಕಾತಿ ಮುಂತಾದ ಮೀಸಲಾತಿ ತಿದ್ದುಪಡಿ) ನಿಯಮಗಳು 2000 ರನ್ವಯ ನಮೂನೆ –3.

**ಮೀಸಲಾತಿ ಪ್ರಮಾಣ ಪತ್ರಗಳು ಚಾಲ್ತಿಯಲ್ಲಿರಬೇಕು.**

18. **ಯೋಜನೆ ನಿರಾಶ್ರಿತರಾದ ಕುಟುಂಬದ ಅಭ್ಯರ್ಥಿಗಳು :**

ಸರ್ಕಾರಿ ಆದೇಶ ಸಂಖ್ಯೆ; ಸಿಆಸುಇ 71 ಸೆನೆನಿ 2001 ದಿನಾಂಕ: 24–10–2002 ರನ್ವಯ ಶೇಕಡ 5 ರಷ್ಟು ಹುದ್ದೆಗಳನ್ನು ಯೋಜನಾ ನಿರಾಶ್ರಿತರ ಗುಂಪಿಗೆ ಮೀಸಲಿಡಲಾಗಿದೆ. ಈ ಹುದ್ದೆಗಳನ್ನು ಕ್ಲೇಮು ಮಾಡುವ ಅಭ್ಯರ್ಥಿಗಳು ಸಂಬಂಧಿಸಿದ ತಹಸೀಲ್ದಾರ್‌ರವರು ನೀಡಿದ ಪ್ರಮಾಣ ಪತ್ರಗಳನ್ನು ಲಗತ್ತಿಸಬೇಕು.

19. **ಮಾಜಿ ಸೈನಿಕರ ಕುಟುಂಬದ ಅಭ್ಯರ್ಥಿಗಳು :**

ಮಾಜಿ ಸೈನಿಕರು ಎನ್ನುವ ಬಗ್ಗೆ ಅಥವಾ ಭಾರತ ದೇಶದ ಒಕ್ಕೂಟದ ಸಶಸ್ತ್ರ ದಳದಲ್ಲಿ ಸೇವೆ ಸಲ್ಲಿಸುತ್ತಿರುವಾಗ ಕೊಲ್ಲಲ್ಪಟ್ಟ ಅಥವಾ ಶಾಶ್ವತವಾಗಿ ಅಂಗಹೀನರಾದ ವ್ಯಕ್ತಿಗಳ ಕುಟುಂಬದ ಸದಸ್ಯರು ಎಂಬ ಬಗ್ಗೆ ಸಕ್ಷಮ ಮಿಲಿಟರಿ ಅಧಿಕಾರಿಗಳಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು.

20. **ಅಂಗವಿಕಲ ಕುಟುಂಬದ ಅಭ್ಯರ್ಥಿಗಳು :**

ಅಂಗವಿಕಲ ಅಭ್ಯರ್ಥಿ ಎಂದರೆ,

(ಎ) (ಅ) ಕಣ್ಣಿನ ದೃಷ್ಟಿಯನ್ನು ಸರಿಪಡಿಸುವ ಕನ್ನಡಕವನ್ನು ಹಾಕಿದಾಗ ಎರಡೂ ಕಣ್ಣಿನ ಪೈಕಿ ಉತ್ತಮವಾದ ಕಣ್ಣಿನಲ್ಲಿ 6:60 ಅಥವಾ 20:2000 (ಸ್ನೆಲನ್) ಅನ್ನು ಮೀರದಿರುವ ದೃಷ್ಟಿ ಸಾಮಾರ್ಥ್ಯ ಇರುವ ವ್ಯಕ್ತಿ.

(ಆ) 20 ಡಿಗ್ರಿಗಳು ಅಥವಾ ಅದಕ್ಕೂ ಕಡಿಮೆಯ ಕೋನದವರೆಗೆ ವಿಸ್ತರಿಸುವ ದೃಷ್ಟಿ ಕ್ಷೇತ್ರದ ಪರಿಮಿತಿಯನ್ನು ಹೊಂದಿರುವ ವ್ಯಕ್ತಿ.

(ಇ) ಸಂಪೂರ್ಣವಾಗಿ ದೃಷ್ಟಿ ಸಾಮರ್ಥ್ಯವನ್ನು ಕಳೆದುಕೊಂಡಿದ್ದವರನ್ನು ನೇಮಕಾತಿಗೆ ಪರಿಗಣಿಸಲಾಗುವುದಿಲ್ಲ.

(ಬಿ) ಎಲ್ಲಾ ಸಂದರ್ಭಗಳಲ್ಲಿ ಜೋರಾಗಿ ಮಾತನಾಡುವುದು ಕೇಳಿಸುವ ಅಥವಾ ಅರ್ಥವಾಗದ ಅಥವಾ ಎರಡೂ ಕಿವಿಗಳ ಪೈಕಿ ಉತ್ತಮವಾದ ಕಿವಿಯ ಶ್ರವಣ ಶಕ್ತಿಯು 90 ಡೆಸಿಬಲ್‌ಗಳಿಗೂ ಹೆಚ್ಚು ತಗ್ಗಿರುವ (ಅತ್ಯಂತ ಕಡಿಮೆ ಶ್ರವಣ ಶಕ್ತಿಯ) ಅಥವಾ ಎರಡೂ ಕಿವಿಗಳು ಶ್ರವಣ ಶಕ್ತಿಯನ್ನು ಕಳೆದುಕೊಂಡಿರುವ ವ್ಯಕ್ತಿ ಅಥವಾ

ಜೀವನದ ಸಾಮಾನ್ಯ ಉದ್ದೇಶಗಳ ಸಂಬಂಧದಲ್ಲಿ ಶ್ರವಣೇಂದ್ರೀಯ ನಿಷ್ಕ್ರಿಯವಾಗಿದ್ದರೆ ಅಂತಹ ಅಭ್ಯರ್ಥಿಗಳು ನೇಮಕಾತಿಗೆ ಅರ್ಹರಾಗುವುದಿಲ್ಲ.

(ಸಿ) ಮೂಳೆಗಳು, ಮಾಂಸಖಂಡಗಳು ಮತ್ತು ಕೀಲುಗಳು ವಾಡಿಕೆಯ ಕಾರ್ಯನಿರ್ವಹಣೆಗೆ ಅಡಚಣೆಯಾಗುವಂತಹ ದೈಹಿಕ ದೋಷ ಅಥವಾ ವಿಕಲತೆ ಹೊಂದಿರುವ ವ್ಯಕ್ತಿಗಳು ಅರ್ಹರಾಗಿರುವುದಿಲ್ಲ.

(ಡಿ) ರಾಜ್ಯದ ಸರ್ಕಾರಿ ಜಿಲ್ಲಾ ಮತ್ತು ತಾಲ್ಲೂಕು ಆಸ್ಪತ್ರೆಗಳಲ್ಲಿರುವ ವೈದ್ಯರು ಅಂಗವಿಕಲರಿಗೆ ವೈದ್ಯಕೀಯ ಪ್ರಮಾಣ ಪತ್ರವನ್ನು ನೀಡಲು ಅಧಿಕಾರ ಹೊಂದಿದವರಾಗಿರುತ್ತಾರೆ.

(ಇ) ದೈಹಿಕ ಅಂಗವಿಕಲತೆ ಒಳಪಡುವ ಅಭ್ಯರ್ಥಿಗಳು ಮೂಳೆ ತಜ್ಞ (ಆರ್ಥೋಪೆಡಿಕ್ ಸರ್ಜನ್) ರಿಂದ ದೈಹಿಕ ಅಂಗವಿಕಲತೆಯ ಮೌಲಿಕರಣವನ್ನು ಅಲ್ಮಿಕೊ ಕಾನ್‌ಪುರ್ (ಡಬ್ಲ್ಯೂ.ಎಚ್.ಒ. ಸ್ಟ್ಯಾಂಡರ್ಡ) ಇದರ ಆಧಾರದ ಮೇಲೆ ಮಾಡಿಸುವುದು ಕಡ್ಡಾಯವಾಗಿರುತ್ತದೆ.

ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 07 ಸೇಸ್ಥೆಅ 94 ದಿನಾಂಕ: 13–09–95 ರಲ್ಲಿ ನಿಗದಿಪಡಿಸಿರುವ ವೈದ್ಯಕೀಯ ಪ್ರಮಾಣ ಪತ್ರವನ್ನು ಸಕ್ಷಮ ವೈದ್ಯಾಧಿಕಾರಿಗಳಿಂದ ಪಡೆದಿರಬೇಕು ಮತ್ತು ಅಂಗವಿಕಲತೆ ಪ್ರಮಾಣವು ಶೇ.40 ರಿಂದ 75 ಕ್ಕಿಂತ ಹೆಚ್ಚಾಗಿರಬಾರದು. ಈ ಪ್ರಮಾಣ ಪತ್ರವನ್ನು ಅರ್ಜಿ ಸ್ವೀಕರಿಸಲು ನಿಗದಿಪಡಿಸಿರುವ ಕಡೆಯ ದಿನಾಂಕದೊಳಗೆ ಅಭ್ಯರ್ಥಿಯು ಪಡೆದುಕೊಂಡಿರಬೇಕು.

**21. ಗ್ರಾಮೀಣ ಅಭ್ಯರ್ಥಿಗಳು :**

ಗ್ರಾಮೀಣ ಅಭ್ಯರ್ಥಿ ಎಂದರೆ, ಒಂದು ಹುದ್ದೆಗಾಗಿ ನಿಯಮಿಸಲಾದ ಅರ್ಹತಾ ಪರೀಕ್ಷೆಯು ಎಸ್.ಎಸ್.ಎಲ್.ಸಿ ಅಥವಾ ಉನ್ನತ ಪರೀಕ್ಷೆಯಾಗಿದ್ದಲ್ಲಿ 1 ನೇ ತರಗತಿಯಿಂದ 10 ನೇ ತರಗತಿವರೆಗೆ ವ್ಯಾಸಂಗದ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಪ್ರಾಧಿಕಾರಿಯಿಂದ ಧೃಡೀಕೃತ ಗ್ರಾಮೀಣ ಪತ್ರವನ್ನು ಲಗತ್ತಿಸ ತಕ್ಕದು. ಗ್ರಾಮೀಣ ಮೀಸಲಾತಿಗೆ ಒಳಪಡುವ ಪ್ರದೇಶಗಳಲ್ಲಿ ವ್ಯಾಸಂಗ ಮಾಡಿ ಉತ್ತೀರ್ಣರಾಗಿರುವವರು ಈ ಮೀಸಲಾತಿಯನ್ನು ಪಡೆಯಲು ಅರ್ಹರು. ಗ್ರಾಮೀಣ ಅಭ್ಯರ್ಥಿಗಳಿಗೆಂದು ಮೀಸಲಿರಿಸಿದ ಹುದ್ದೆಗಳನ್ನು ಕ್ಲೇಮ್ ಮಾಡುವ ಸಾಮಾನ್ಯ ಅರ್ಹತೆಯ ಅಭ್ಯರ್ಥಿಗಳು ನಮೂನೆ–2ರ ಪ್ರಮಾಣ ಪತ್ರವಲ್ಲದೇ ಮೇಲುಸ್ಥರಕ್ಕೆ ಸೇರಿಲ್ಲದಿರುವ ಬಗ್ಗೆ ನಮೂನೆ–1ರಲ್ಲಿ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ ಸಂಬಂಧಿತ ತಹಶೀಲ್ದಾರ್‌ರವರಿಂದ ಪಡೆದು ಅದರ ಒಂದೊಂದು ಫೋಟೋ ಪ್ರತಿಗಳನ್ನು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು. ಅಂತೆಯೇ ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, 2ಬಿ, 3ಎ, 3ಬಿ ಮೀಸಲಾತಿಗೆ ಸೇರಿದ ಅಭ್ಯರ್ಥಿಗಳು ಕಡ್ಡಾಯವಾಗಿ ಗ್ರಾಮೀಣ ಮೀಸಲಾತಿಯ ಪ್ರಮಾಣ ಪತ್ರವನ್ನು ನಮೂನೆ–2ರಲ್ಲಿ ನಿಗದಿತ ಪ್ರಾಧಿಕಾರಿಗಳಿಂದ ಪಡೆದು ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಯವರಿಂದ ಮೇಲು ರುಜು ಮತ್ತು ಮೊಹರು ಮಾಡಿಸಿಕೊಂಡು ಅದರ ಒಂದು ಪ್ರತಿಯನ್ನು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು.

**22. ಕನ್ನಡ ಮಾಧ್ಯಮ ಅಭ್ಯರ್ಥಿಗಳು :**

ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 71 ಎಸ್‌ಆರ್‌ಆರ್ 2001 ದಿನಾಂಕ: 24–10–2002ರಲ್ಲಿ ಹೊರಡಿಸಿದ ಕರ್ನಾಟಕ ಸರ್ಕಾರಿ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು

1977ರ ನಿಯಮ (9) (1) (ಸಿ) ರ ಅನ್ವಯ ಅಭ್ಯರ್ಥಿಯು 1 ರಿಂದ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುತ್ತಾರೆ ಎನ್ನುವ ಬಗ್ಗೆ ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಹಾಗೂ ಮೊಹರು ಪಡೆದ ಪ್ರಮಾಣ ಪತ್ರದ ಪ್ರತಿಯನ್ನು ಅರ್ಜಿಯೊಂದಿಗೆ ಲಗತ್ತಿಸಬೇಕು.

**23. ಅರ್ಹತಾ ಷರತ್ತುಗಳು :**

ಅ) ಭಾರತೀಯ ನಾಗರೀಕನಾಗಿರತಕ್ಕದ್ದು.

ಆ) ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು ಮತ್ತು ಅವರ ನೇಮಕಾತಿಯ ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟು ಮಾಡುವ ಸಂಭವ ಇರುವ ಯಾವುದೇ ದೈಹಿಕ ನ್ಯೂನತೆಯಿಂದ ಮುಕ್ತರಾಗಿರಬೇಕು.

ಇ) ದೈಹಿಕವಾಗಿ ಅನರ್ಹರಾಗಿದ್ದಾರೆಂಬುದಾಗಿ ವೈದ್ಯಕೀಯ ಮಂಡಳಿಯ ವರದಿಯ ಮೇಲೆ ಅನರ್ಹರೆಂಬುದಾಗಿ ತಿರಸ್ಕರಿಸುವ ಪೂರ್ಣ ವಿವೇಚನೆಯನ್ನು ರಾಜ್ಯ ಸರ್ಕಾರವು ಕಾಯ್ದಿರಿಸಿಕೊಂಡಿದೆ ಮತ್ತು ಸರ್ಕಾರದ ವಿವೇಚನೆಯು ಯಾವುದೇ ವಿಧದಲ್ಲೂ ಈ ನಿಯಮಗಳ ಮೂಲಕ ಸೀಮಿತವಾಗಿರುವುದಿಲ್ಲ.

ನಿಗದಿತ ಶೈಕ್ಷಣಿಕ ಅರ್ಹತೆಯ ಜೊತೆಗೆ ಈ ಮೇಲ್ಕಂಡ ಅರ್ಹತೆಗಳನ್ನು ಹೊಂದಿರುವ ಅಭ್ಯರ್ಥಿಗಳು ನೇಮಕಾತಿಗಾಗಿ ಅರ್ಜಿ ಸಲ್ಲಿಸಲು ಅರ್ಹತೆಯನ್ನು ಹೊಂದಿರುತ್ತಾರೆ.

**24. ಕೆಳಕಂಡ ದಾಖಲೆಗಳನ್ನು ಅರ್ಜಿಯ ಜೊತೆಗೆ ಲಗತ್ತಿಸಿದೆಯೇ ಎಂದು ಖಚಿತಪಡಿಸಿಕೊಳ್ಳುವುದು**

- ಹುದ್ದೆಗಳಿಗೆ ನಿಗದಿಪಡಿಸಲಾದ ವಿದ್ಯಾರ್ಹತೆಯ ಎಲ್ಲಾ ವರ್ಷಗಳ/ ಸೆಮಿಸ್ಟರ್‌ಗಳ ಅಂಕ ಪಟ್ಟಿ ಹಾಗೂ ಪ್ರಮಾಣ ಪತ್ರಗಳು
- ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ/ವರ್ಗಾವಣೆಯ ಪ್ರಮಾಣ ಪತ್ರ/ಜನ್ಮ ದಿನಾಂಕವನ್ನು ತೋರಿಸುವ ಸಂಚಿತ ದಾಖಲೆಯ ಉದ್ಧೃತ ಭಾಗ.
- ಸೈನಿಕ ಸೇವೆಯಿಂದ ಬಿಡುಗಡೆಯಾದ/ಮುಕ್ತಿ ಹೊಂದಿದ ಬಗೆಗಿನ ಪ್ರಮಾಣ ಪತ್ರ (ಮಾಜಿ ಮೀಸಲಾತಿ ಕೋರಿದ್ದಲ್ಲಿ)
- ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, ಪ್ರವರ್ಗ–2ಬಿ, ಪ್ರವರ್ಗ–3ಎ, ಪ್ರವರ್ಗ–3ಬಿ ಗಳ ಪ್ರಮಾಣ ಪತ್ರಗಳು (ಮೀಸಲಾತಿ ಕೋರಿದ್ದಲ್ಲಿ)
- ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ನಮೂನೆ–1 ಮತ್ತು 2ರಲ್ಲಿ (ಮೀಸಲಾತಿ ಕೋರಿದ್ದಲ್ಲಿ)
- ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)
- ಅಂಗವಿಕಲ ಮೀಸಲಾತಿ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)
- ಯೋಜನೆಗಳಿಂದ ನಿರಾಶ್ರಿತರಾದ ಬಗ್ಗೆ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)
- ವಿಧವೆಯಾದಲ್ಲಿ ಸಕ್ಷಮ ಪ್ರಾಧಿಕಾರದಿಂದ ಪಡೆದ ಪ್ರಮಾಣ ಪತ್ರ.

**ಮೇಲ್ಕಂಡಂತೆ ನಿಗದಿಪಡಿಸಿದ ದಾಖಲೆಗಳನ್ನು ಸಲ್ಲಿಸದಿದ್ದಲ್ಲಿ ಅರ್ಜಿಗಳನ್ನು ತಿರಸ್ಕರಿಸಲಾಗುವುದು.**

**25. ಇತರೆ ಸೂಚನೆಗಳು:**

1) ಅಭ್ಯರ್ಥಿಗಳು ತಮ್ಮ ಮಾಹಿತಿಗಾಗಿ ಭರ್ತಿ ಮಾಡಿ ಸಲ್ಲಿಸಿದ ಅರ್ಜಿಯ ಒಂದು ಫೋಟೋ ಪ್ರತಿಯನ್ನು ತಮ್ಮೊಂದಿಗೆ ಇಟ್ಟುಕೊಳ್ಳಲು ಸೂಚಿಸಿದೆ.

2) ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕವು ಸಾರ್ವತ್ರಿಕ ರಜಾ ದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೆಯ ದಿನವು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗುವುದು.

ಆಯುಕ್ತರು

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ

**BRUHATH BANGALORE MAHANAGARA PALIKE**

**Nagara Palike Offices, Narasimharaja Square, Bangalore-02**

**NOTIFICATION**

**NOTIFICATION NO.B12(3)PR/07/2007-08, Date: 06th November 2008**

Applications are invited for filling up of the Stenographer- **Group `C'** vacant posts in different departments of BBMP by Direct Recruitment subject to the following conditions.

Duly filled in applications from the eligible candidates, in prescribed format, with relevant documents attached, should reach the Commissioner, Bruhath Bangalore Mahanagara Palike, Office of the Assistant Commissioner(Recruitment), Council Building, N.R.Square, Bangalore-560002 on or before 20-12-2008, to be **sent through post or Courier only** (Applications will not be received personally). The commissioner, Bruhath Bangalore Mahanagara Palike reserves the right to increase or reduce the number of posts.

**Note : The applicants who have already applied for the said post vide notification no.B12(3)PR/07/07-08, dt.10-08-2007, need not to apply again. If the applicants wishes to submit the additional documents can sent the same through post or courier. Those who possess the prescribed qualification, they will be added to the merit list.**

**Details of post :**

| Sl. no | Name of the post | Total no. of posts | Educational Qualification | Scale of pay |
|---|---|---|---|---|
| 01 | Stenographer | 32 | 1. Pass in SSLC examination or equivalent qualification.<br>2. Pass in Sr.Grade Kannada and English typing and shorthand conducted by Karnataka Secondary Education Examination Board.<br>**OR**<br>Pass in Kannada Shorthand and Typing or English Shorthand and Typing in 4th, 5th & 6th Semester / 3rd year D.S.P recognized by the Technical Educational Department , and those who have not studied shorthand and typing in the respective language, should have passed the same in Senior grade examinations conducted by Karnataka Secondary Education Examination Board.<br>For those candidates who have passed Proficiency grade examination, 5% grace marks will be added to the total percentage of marks secured in the prescribed qualification. | 7275-13350 |

**Classification :**

| Sl. no | Name of the post | No. of posts | Classification | | | | | | | | |
|---|---|---|---|---|---|---|---|---|---|---|---|
| | | | | Others | Women | Rural | Ex-ser | K.M.C | P.D | Ph.H | Total |
| 01 | Stenographer | 32 | S.C | 02 | 01 | 01 | -- | -- | -- | -- | 04 |
| | | | S.T | -- | 01 | -- | -- | -- | -- | -- | 01 |
| | | | Cat-(1) | -- | 01 | -- | -- | -- | -- | -- | 01 |
| | | | Cat-2(A) | 02 | 01 | 02 | -- | -- | -- | -- | 05 |
| | | | Cat-2(B) | -- | 01 | -- | -- | -- | -- | -- | 01 |
| | | | Cat-3(A) | 01 | 01 | -- | -- | -- | -- | -- | 02 |
| | | | Cat-3(B) | 01 | 01 | -- | -- | -- | -- | -- | 02 |
| | | | General | 03 | 04 | 04 | 02 | 01 | 01 | 01 | 16 |
| | | | Starting point of Roaster of the Classified posts : 17 | | | | | | | | |

1)Ex-S -- Ex-Serviceman 2) K.M.C -- Kannada Medium Candidate 3) P.D -- Project Displaced
4) Ph.H – Physically Handicapped.

**INSTRUCTIONS & CONDITIONS TO CANDIDATES**

1. **Applications should be sent through post or Courier only.**
2. **Age Limit:** The age limit for the candidates shall not exceed the prescribed age limit as on the last date of submission of application.

| | | |
|---|---|---|
| S.C/S.T/Cat-1 | : | Min -18, Max - 38 Years |
| Backward Caste | : | Min -18, Max - 36 Years |
| General | : | Min -18, Max - 33 Years |

Provided that in the cases of the following, the upper age limit shall be relaxed as follows:

a) in the case of a candidate who is or was holding a post under the Government or a local authority or [a corporation established by a State Act or a Central Act or established by the Government

under a State Act or Central Act and owned or controlled by the Government] by the number of years during which he is or was holding such post or [ten] years whichever is less;

b) in the case of a candidate who is an ex-serviceman, by three years plus the number of years of service rendered by him in the Armed forces of the Union;

c) in the case of a candidate who is physically handicapped, by ten years;

d) in the case of a candidate who is a widow, by ten years;

3. The Candidates should have the knowledge of Kannada language.

4. The candidates must apply in the specified application form which could be downloaded from the BBMP website **www.bmpoline.org** to the Commissioner, Bangalore Mahanagara Palike, Recruitment Section, Council Building N.R. Square, Bangalore- 560002**. super scribing on the envelope the name of post applied for**. Applications will not be provided to the candidates from BBMP.

5. Applications submitted after the due date will not be considered.

6. A Government servant applying for an appointment to any service or post shall submit his application through the authority competent to appoint him to the post which he holds at the time of making the application.

7. The candidate must attach the latest passport size photograph on the right side top corner of the application

8. Canvassing or recommendation made for the selection of applicant will result in rejecting the application.

9. No Correspondence with the applicants will be entertained.

10. Applicants desirous of submitting applications for more than one post should submit separate applications mentioning name of the post separately along with necessary documents.

11. For candidates selected under reserved category, appointment order will be issued only after obtaining Validation Certificate from the Deputy Commissioner of the concerned district, who is the Chairman of Caste/ Income Investigating Committee).

12. The Commissioner, Bruhath Bangalore Mahanagara Palike reserves the right to appointment to the above posts.

13. While submitting the application, a D.D for - Rs.50/- in respect of S.C/S.T/Cat-1 and others for Rs.100/- obtained from a Nationalised Bank, in favour of the `**Commissioner, Bruhath Bangalore Mahanagara Palike', N.R.Square, Bangalore – 560002** must be enclosed. Name and address of the applicant should be indicated on the back of the DD. Application without DD will be rejected.

14. Unsigned applications will not be considered.

15. **Selection of candidates will be based on merit only (marks obtained in the qualifying examination)**

16. **BBMP will not be responsible for any postal delay.**

17. Candidates desirous of availing the benefit of reservation should obtain Certificate from the revenue authority not less than the rank of a Thasildar of the concerned jurisdiction.

- S.C/S.T/Cat-1 : Government Notification No. SWD.132. SAD97 dt:8.02.2000 prescribed form-1 and 2
- Cat- 2A, 2B, 3A, 3B : Govt. Notification No : SWD 126 BCA dt. 13-12-2003 (Candidates belonging to SC/ST/Cat-1 and Backward classes issued pertaining to Karnataka Notified Caste, Notified Tribe and Backward Class (Appointment and reservation) (amended) rules 2000, in the prescribed Form No-3

**The Certificates should be valid as on the date of application..**

18. **Project displaced candidates:**

Government Order No: SARD 71 SRR 2001 dt: 24-10-2002, 5% of the posts are reserved for Project Displaced persons. Applicants under this category should enclose certificate in this regard..

19. **Ex-Serviceman Candidates::**

Certificate from the Military Authority for being Ex-Servicemen or belonging to the family or persons killed during the service or permanently disabled during service in Indian Union Army shall be enclosed and such certificate should be obtained before the last date of submission of application. (as per rule 9-1A of Karnataka Government Services (General Recruitment) rules 1977)

20. **Physically Handicapped Candidates:**

**Physically Handicapped candidate means:**

a)(1) Person after wearing eyesight setting spectacles, out of two eyes, one good eye shall have the capacity of not more than 6:60 or 20:2000 (snelen).

(2) Persons having an eyesight of 20 degrees or lesser than angle extension right area.

(3) The person who has lost full sight cannot be considered for recruitment.

(b) Persons who have hearing impaired under loud speaking circumstances or cannot listen from both of which one Ear's hearing capacity is below 90 decibels (the lowest hearing capacity) or who has lost hearing capacity of both the Ears. Any person whose hearing capacity in relation to general purposes of life is numb, such candidates are NOT ELIGIBLE for recruitment.

(c) Persons, having physical debility of Bones, Muscles & Joints which will obstruct normal working or handicapped are not eligible.

(d) The doctors of Government Hospitals at district and Taluk are empowered to issue Medical Certificate for the handicapped.

(e) For the candidates who come under category of Physically Handicapped reduced debility, shall produce evaluation of Physical debility certificate from Orthopaedics Specialist as per ALMICO KANPUR (WHO standard) is compulsory.

**Physically Handicapped Candidates:**should obtain Medical certificate as per Government Order DPAR 07 SSA-94 dated: 13-9-1995 and shall be certified by Authorised Medical Officer and percentage of debility shall not be more than 40 to 75. Candidates have to obtain such certificates before the last date of receipt of applications.

21. **Rural Candidates: :**

Rural Candidate means, if the qualifying exam prescribed for a post is SSLC or higher, candidate should have studied from 1$^{st}$ to 10$^{th}$ Std in rural area and a certificate issued by the competent authority should be enclosed.

22. **Kannada Medium Candidates :**

As per Rule 9 (1) (c) of Karnataka Government Services (General Recruitment) Rules 1977 and Government Order No.DPAR 71 SRR 2001, dt:24.10.2002, Candidate should have studied in Kannada medium from 1$^{st}$ to 10$^{th}$ Std, and a certificate issued by competent authority should be enclosed.

23. **Eligibility conditions** :

a) must be a citizen of India.

b) candidate should satisfy the appointing authority that he is physically fit to discharge the duties that he may be called upon to perform. The opinion of the medical authority, regarding the physical fitness or otherwise of the candidate shall be binding on the candidate.

Along with the prescribed educational qualification, the applicants having the above eligibilities are eligible to apply for appointment.

24. **Ensure that the following documents are enclosed:**

**Mandatory:**

- **Marks cards of all the years, semesters of the qualifying examinations, SSLC and other equivalent exams.**
- **Proof of date of Birth viz. SSLC marks/TC etc.**

**If applicable:**

- **Relieve order copy from the defence service**
- **Documents for claming Reservations viz. SC/ST, CAT-1, 2A, 2B, 3A, 3B etc.**
- **Rural education certificate**
- **Certificate of Kannada medium.**
- **Physically Handicapped certificate.**
- **Project Displaced certificate.**
- **In case of widow, certificate from the competent authority.**

25. **Other Instructions :**

a) Applicants are instructed to keep the duplicate copy of the duly filled application for their information.

b) If the last date for receiving applications is declared as Government holiday, the day after that date shall be the last date for receiving the applications.

Commissionar

Bruhath Bangalore Mahanagara Palike.

**ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ.**

**ನೇರ ನೇಮಕಾತಿಗಾಗಿ ಅರ್ಜಿ ನಮೂನೆ**

**ಸಹಾಯಕ ಆಯುಕ್ತರವರ ಕಛೇರಿ,**
**ನೇಮಕಾತಿ ಮತ್ತು ವಿಚಾರಣಾ ವಿಭಾಗ,**
**ಎನ್.ಆರ್.ಚೌಕ,**
**ಬೆಂಗಳೂರು–560002**

**ಪ್ರಕಟಣೆ ಸಂಖ್ಯೆ:–__________________.**
**ಜಾಹೀರಾತು ಹೊರಡಿಸಿದ ದಿನಾಂಕ:–____________.**
**ಅರ್ಜಿ ಸಲ್ಲಿಸುತ್ತಿರುವ ಹುದ್ದೆಯ ಹೆಸರು:–_______________**

| ಡಿ.ಡಿ.ಪಡೆದ ಬ್ಯಾಂಕ್‌ನ ಹೆಸರು | ಸಂದಾಯ ಮಾಡಿದ ಮೊತ್ತ | ಡಿ.ಡಿ.ಸಂಖ್ಯೆ ಮತ್ತು ದಿನಾಂಕ |
|---|---|---|
| | | |

1. ಅರ್ಜಿದಾರನ/ಳ ಪೂರ್ಣ ಹೆಸರು: ..
2. ತಂದೆ/ಪೋಷಕರ ಹೆಸರು: ..
3. ಖಾಯಂ ವಿಳಾಸ:
4. ಅಂಚೆ ವಿಳಾಸ:
5. ಸಂಪರ್ಕಿಸಬಹುದಾದ ದೂರವಾಣಿ ಸಂಖ್ಯೆ:
6. ಲಿಂಗ ಪುರುಷ ಮಹಿಳೆ
7. ಜನ್ಮ ದಿನಾಂಕ S.S.L.C. ಅಂಕ ಪಟ್ಟಿಯಲ್ಲಿರುವಂತೆ
8. **ಮೀಸಲಾತಿ ಕೋರಿದ್ದಲ್ಲಿ: ಅನ್ವಯಿಸುವ ಬಾಕ್ಸ್‌ನಲ್ಲಿ " "ಗುರುತು ಹಾಕಿ. [ಧೃಡೀಕರಣ ಪತ್ರಗಳನ್ನು ಕಡ್ಡಾಯವಾಗಿ ಲಗತ್ತಿಸಬೇಕು]**

ಅ. ಪ.ಜಾ/ಪ.ಪಂ.ದವರೇ: ಪ.ಜಾತಿ ಪ.ಪಂಗಡ . ಉಪಜಾತಿ ನಮೂದಿಸಬೇಕು

| | | | | | | |
|---|---|---|---|---|---|---|
| ಆ. ಹಿಂದುಳಿದ ವರ್ಗದವರೇ | | | | | | |
| | ಪ್ರ–1 | 2ಎ | 2ಬಿ | 3ಎ | 3ಬಿ | ಉಪಜಾತಿ ನಮೂದಿಸಬೇಕು |
| ಇ. ಸಾಮಾನ್ಯ ವರ್ಗದವರೇ | | | | | | |
| | ಹೌದು | ಇಲ್ಲ | | | | |
| ಈ. ಇತರೆ ಮೀಸಲಾತಿ | | | | | | |
| | ಗ್ರಾಮೀಣ | ಕ.ಮಾ.ಅ | ಅಂ.ವಿ. | ಯೋ.ನಿರಾ | ಮಾ.ಸ್ಯೆ. | |

| 9. ವಿದ್ಯಾರ್ಹತೆ: | ಪದವಿ | | | | ಡಿಪ್ಲೋಮ | |
|---|---|---|---|---|---|---|
| | ವಿಜ್ಞಾನ | ವಾಣಿಜ್ಯ | ಕಲೆ | ಇತರೆ(ನಮೂದಿಸಿ) | ಸೆಕ್ರೆಟೇರಿಯಲ್ ಪ್ರಾಕ್ಟೀಸ್ | ಹೆಲ್ತ್ ಇನ್ಸ್‌ಪೆಕ್ಟರ್ |
| ವಿಷಯ ನಮೂದಿಸಿ | | | | | | |

| | ಒಟ್ಟು ಅಂಕಗಳು | ಗಳಿಸಿದ ಅಂಕಗಳು | ಶೇಕಡ |
|---|---|---|---|
| 1. ಎಸ್,ಎಸ್,ಎಲ್.ಸಿ. | | | |
| 2. ಪಿ.ಯು.ಸಿ | | | |
| **ಪದವಿ / ಡಿಪ್ಲೋಮ** | | | |
| 1 ನೇ ವರ್ಷ/ಸೆಮಿಸ್ಟರ್ | | | |
| 2 ನೇ ವರ್ಷ/ಸೆಮಿಸ್ಟರ್ | | | |
| 3 ನೇ ವರ್ಷ/ಸೆಮಿಸ್ಟರ್ | | | |
| 4 ನೇ /ಸೆಮಿಸ್ಟರ್ | | | |
| 5 ನೇ /ಸೆಮಿಸ್ಟರ್ | | | |
| 6 ನೇ /ಸೆಮಿಸ್ಟರ್ | | | |
| **ಶೀಘ್ರಲಿಪಿಗಾರರು** | | | |
| 1. ಕನ್ನಡ ಬೆರಳಚ್ಚು ಪ್ರೌಢದರ್ಜೆ | | | |
| ಕನ್ನಡ ಶೀಘ್ರಲಿಪಿ ಪ್ರೌಢದರ್ಜೆ | | | |
| 2. ಇಂಗ್ಲೀಷ್ ಬೆರಳಚ್ಚು ಪ್ರೌಢದರ್ಜೆ | | | |
| ಇಂಗ್ಲೀಷ್ ಶೀಘ್ರಲಿಪಿ ಪ್ರೌಢದರ್ಜೆ | | | |

9. ಬೆಂಗಳೂರು ಮಹಾನಗರ ಪಾಲಿಕೆ/ಸರ್ಕಾರಿ ಸಂಸ್ಥೆಯಲ್ಲಿ ಈ ಹಿಂದೆ ಯಾವುದಾದರೂ ಸೇವೆಯಲ್ಲಿದ್ದಲ್ಲಿ ಅದರ ಪೂರ್ಣ ವಿವರ____________ಮತ್ತು ಹುದ್ದೆಯಿಂದ ತೆಗೆದುಹಾಕಿದ್ದಲ್ಲಿ ಕಾರಣ ________________________

ಈ ಮೇಲ್ಕಂಡ ಎಲ್ಲಾ ವಿವರಗಳು ಸತ್ಯವೆಂದು ಪ್ರಮಾಣೀಕರಿಸುತ್ತೇನೆ. ಸತ್ಯವಲ್ಲವೆಂದು ತಿಳಿದುಬಂದಲ್ಲಿ ನನ್ನ ಅರ್ಜಿಯನ್ನು ತಿರಸ್ಕರಿಸಬಹುದು. ನನ್ನ ವಿರುದ್ಧ ಸಿವಿಲ್/ಕ್ರಿಮಿನಲ್ ಮೊಕದ್ದಮೆ ಹೂಡಬಹುದು.

ಸ್ಥಳ: ಅರ್ಜಿದಾರನ/ಳ ಸಹಿ

ದಿನಾಂಕ: ಆಯುಕ್ತರು

ಪಿ.ಡಿ. 115 ಬೆಂಗಳೂರು ಮಹಾನಗರ ಪಾಲಿಕೆ

## ಕಾರ್ಯಪಾಲಕ ಅಭಿಯಂತರರ ಕಛೇರಿ, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ

### ಅಲ್ಪಾವಧಿ ಟೆಂಡರ್ ಪ್ರಕಟಣೆ

**ಸಂಖ್ಯೆ: ಕಾಪಾಇಂ/ರಾಹೆ/ಚಿ/ಸಇಂ–2/ರಾಹೆ–206, 13/2008–2009/2571, ದಿನಾಂಕ: 24ನೇ ನವೆಂಬರ್ 2008**

1. ಕಾರ್ಯಪಾಲಕ ಇಂಜಿನಿಯರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರಿಂದ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೊಂದಾಯಿತರಾದ ಎರಡನೇ ದರ್ಜೆ ಮತ್ತು ಮೇಲ್ಪಟ್ಟ ಅರ್ಹ ಗುತ್ತಿಗೆದಾರರಿಂದ ಈ ಕೆಳಕಂಡ ಕೋಷ್ಟಕದಲ್ಲಿ ನಮೂದಿಸಿದ ಕಾಮಗಾರಿಗಳಿಗೆ ಐಟಂವಾರು ಟೆಂಡರ್‌ನ್ನು ಕರ್ನಾಟಕ ರಾಜ್ಯ ಸರ್ಕಾರದ ರಾಜ್ಯಪಾಲರ ಪರವಾಗಿ ಆಹ್ವಾನಿಸಲಾಗಿದೆ. ಗುತ್ತಿಗೆದಾರರು ಈ ಕೆಳಕಂಡ ಕೋಷ್ಟಕದಲ್ಲಿ ನಮೂದಿಸಿರುವ ಯಾವುದೇ ಅಥವಾ ಎಲ್ಲಾ ಕಾಮಗಾರಿಗಳಿಗೆ ಟೆಂಡರ್‌ಗಳನ್ನು ಸಲ್ಲಿಸಬಹುದಾಗಿದೆ.

2. ಟೆಂಡರ್ ಡಾಕ್ಯುಮೆಂಟ್ಸ್‌ಗಳನ್ನು ಕಾರ್ಯಪಾಲಕ ಇಂಜಿನಿಯರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಕಛೇರಿಯಿಂದ ದಿನಾಂಕ: 19.12.2008 ರಿಂದ 20.12.2008ರ ವರೆಗೆ ಕಛೇರಿ ಕೆಲಸದ ಸಮಯದಲ್ಲಿ (ದ್ವಿಪ್ರತಿಗಳಲ್ಲಿ) ಕೋಷ್ಟಕದಲ್ಲಿ ನಮೂದಿಸಿದ ಬೆಲೆಯನ್ನು (ಹಿಂದಿರುಗಿಸಲಾರದಂತಹದ್ದು) ನಗದಾಗಿ ಅಥವಾ ಕಾರ್ಯಪಾಲಕ ಇಂಜಿನಿಯರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಹೆಸರಿನಲ್ಲಿ ಪಡೆದ ರಾಷ್ಟ್ರೀಕೃತ:ಷೆಡ್ಯೂಲ್ ಬ್ಯಾಂಕ್‌ನ ಡಿಮ್ಯಾಂಡ್ ಡ್ರಾಫ್ಟ್/ಪೇ ಆರ್ಡರ್ ನೀಡಿ ಖರೀದಿಸಬಹುದು. ಟೆಂಡರ್ ಡಾಕ್ಯುಮೆಂಟ್ಸ್‌ಗಳನ್ನು ಅಂಚೆ ಮೂಲಕ ಪಡೆಯಲಿಚ್ಛಿಸುವವರು ರೂ. 250–00 ಹೆಚ್ಚಿಗೆ ಪಾವತಿಸತಕ್ಕದ್ದು. ಅಂಚೆ ವಿಳಂಬಕ್ಕೆ ಕಾರ್ಯಪಾಲಕ ಇಂಜಿನಿಯರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರು ಹೊಣೆಗಾರರಿರುವುದಿಲ್ಲ.
3. ಟೆಂಡರ್‌ನೊಂದಿಗೆ ಈ ಕೆಳಕಂಡ ಕೋಷ್ಟಕದಲ್ಲಿ ನಮೂದಿಸಿದ ಕಾಮಗಾರಿಗಳಿಗೆ ನಿರ್ದಿಷ್ಟಪಡಿಸಿದ ಮುಂಗಡ ಹಣ ಠೇವಣಿ (ಇ.ಎಂ.ಡಿ.) ಯನ್ನು ಲಗತ್ತಿಸಿರಬೇಕು. ಮುಂಗಡ ಹಣ ಠೇವಣಿಯು (ಇ.ಎಂ.ಡಿ.) ಟೆಂಡರ್ ಡಾಕ್ಯುಮೆಂಟ್‌ನಲ್ಲಿ ನಿರ್ಧಿಷ್ಟಪಡಿಸಿದ ಯಾವುದಾದರೂ ಒಂದು ರೂಪದಲ್ಲಿ ಇರತಕ್ಕದ್ದು ಹಾಗೂ ಇದರ ವ್ಯಾಲಿಡಿಟಿ ಟೆಂಡರ್ ವ್ಯಾಲಿಡಿಟಿ ಅವಧಿಗಿಂತ (90 ದಿನ) 45 ದಿನಗಳ ಹೆಚ್ಚಿನ ಅವಧಿಗೆ ಇರತಕ್ಕದ್ದು. ಅಂದರೆ ಒಟ್ಟಾರೆ 135 ದಿನಗಳ ಅವಧಿ ಇರತಕ್ಕದ್ದು.
4. ಟೆಂಡರ್‌ಗಳನ್ನು ಕಾರ್ಯಪಾಲಕ ಇಂಜಿನಿಯರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರಿಗೆ ದಿನಾಂಕ: 22.12.2008 ರಂದು ಸಂಜೆ 4–00 ಗಂಟೆಯೊಳಗೆ ಸಲ್ಲಿಸುವುದು. ಟೆಂಡರ್‌ಗಳನ್ನು ಅದೇ ದಿನ ಸಂಜೆ 5–00 ಗಂಟೆಗೆ ಹಾಜರಿದ್ದ ಗುತ್ತಿಗೆದಾರರ ಅಥವಾ ಅವರ ಪ್ರತಿನಿಧಿಗಳ ಸಮ್ಮುಖದಲ್ಲಿ ತೆರೆಯಲಾಗುವುದು. ಒಂದು ವೇಳೆ ಅನಿವಾರ್ಯ ಕಾರಣದಿಂದ ಸದರಿ ದಿನಾಂಕವು ರಜಾದಿನವಾದರೆ ಮಾರನೆಯ ಕೆಲಸದ ದಿನ ಅದೇ ಸಮಯದಂದು ಟೆಂಡರ್‌ಗಳನ್ನು ಸ್ವೀಕರಿಸಿ ತೆರೆಯಲಾಗುವುದು.

ಹೆಚ್ಚಿನ ವಿವರಗಳನ್ನು ಟೆಂಡರ್ ಡಾಕ್ಯುಮೆಂಟ್‌ನಲ್ಲಿ ಪಡೆಯಬಹುದು.

**ಕೋಷ್ಟಕ**

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗೆ ಇಟ್ಟಿರುವ ಹಣ ರೂ. ಲಕ್ಷಗಳಲ್ಲಿ | ಮುಂಗಡ ಠೇವಣಿ ಹಣ ರೂ.ಗಳಲ್ಲಿ | ಟೆಂಡರು ಫಾರಂಗಳ ಬೆಲೆ ರೂ. | ಕಾಮಗಾರಿಯನ್ನು ಪೂರ್ಣಗೊಳಿಸಲು ನಿಗಧಿಪಡಿಸಿರುವ ಅವಧಿ ಮಳೆಗಾಲ ಸೇರಿ |
|---|---|---|---|---|---|
| 1 | ರಾಷ್ಟ್ರೀಯ ಹೆದ್ದಾರಿ – 206ರ ತುಮಕೂರು–ಹೊನ್ನಾವರ ಸೆಕ್ಷನ್‌ನ ಕಿ.ಮೀ. 205.60, 208.30 ಮತ್ತು 210.10 ರಲ್ಲಿ ಹಾಗೂ ರಾಷ್ಟ್ರೀಯ ಹೆದ್ದಾರಿ – 13ರ ಸೊಲ್ಲಾಪುರ–ಮಂಗಳೂರು ಸೆಕ್ಷನ್‌ನ ಕಿ.ಮೀ. 524.20, 524.80 ಮತ್ತು ಕಿ.ಮೀ. 526.40 ರಲ್ಲಿ ನೀರು ಸರಬರಾಜು ಪೈಪ್‌ಲೈನ್ ಅಳವಡಿಸಲು ಪೈಪ್‌ಡಕ್ಟ್‌ಗಳ ನಿರ್ಮಾಣ ಕಾಮಗಾರಿ. | 15.94 | 39,850/– | 3000–00 + ತೆರಿಗೆ | 3 (ಮೂರು) ತಿಂಗಳು |

ಕಾರ್ಯಪಾಲಕ ಇಂಜಿನಿಯರ್
ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ.

**Office of the Executive Engineer, National Highway Division, Chitradurga**

**SHORT TERM TENDER NOTIFICATION**

**No:ENH/CTA/AE-2/TND-NOTI/NH-206, 13/Pipeduct/2008-09/2571, Dated: 24th November 2008**

1. The Executive Engineer, National Highway Division, Chitradurga invites tenders from eligible tenderers, registered in Karnataka Public Works, National Highways, Bangalore for the construction of works detailed in the Table below. The tenderers may submit tenders for any or all of the works given in the Table.
2. Tender documents may be purchased from the office of the Executive Engineer, National Highway Division, Chitradurga from 19.12.2008 to 20.12.2008 for a non-refundable fee (for two sets) as indicated in the Table below, in the form of cash or Demand Draft/Pay Order on any

Nationalized/Scheduled bank payable at Chitradurga in favour of Executive Engineer, National Highway Division, Chitradurga, Interested tenders may obtain further information at the same address. Tender documents requested by mail will be dispatched by registered/speed post on payment of an extra amount of Rs. 250/-. The Executive Engineer, National Highway Division, Chitradurga will not be held responsible for the postal delay if any, in the delivery of the documents or non-receipt of the same.

3. Tenders must be accompanied by earnest money deposit specified for the work in the Table below. Earnest money deposit will have to be any one of the forms as specified in the Tender document and shall have to be valid for 45 days beyond the validity of the tender.
4. Tenders must be delivered to Executive Engineer, National Highway Division, Chitradurga on or before 16 hours on 22.12.2008 (date) and will be opened on the same day at 17 hours, in the presence of the tenderers who wish to attend. If the office happens to be closed on the date of receipt of the tenders as specified, the tenders will be received and opened on the next working day at the same time and venue.
5. Other details can be seen in the tender documents.

| Sl. No. | Name of Work | Approximate Value of work (Rs.) | Earnest Money Deposit (Rs.) | Cost of document (Rs.) | Period of completion | Eligibility of the Contractor |
|---|---|---|---|---|---|---|
| 1 | Construction of Pipe duct for crossing water supply pipe line at Km 205.60, 208.30 and 210.10 on N.H. 206 of Tumkur-Honnavar Section, and Km 524.20, 524.80 and 526.40 on N.H. 13, Sholapur-Mangalore Section | 15.94 Lakhs | Rs. 39,850/- | 3000/- + 12.50% VAT | 3 Months | Class-II and above. |

Executive Engineer,
National Highway Division,
Chitradurga.

P.R. 625

**ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ನಿರ್ದೇಶಕರ ಕಛೇರಿ,**
**ಸರ್ಕಾರಿ ಕೇಂದ್ರ ಮುದ್ರಣಾಲಯ, ಆರ್.ವಿ. ಕಾಲೇಜ್ ಅಂಚೆ, 8ನೇ ಮೈಲಿ,**
**ಮೈಸೂರು ರಸ್ತೆ, ಬೆಂಗಳೂರು – 560 059**

**ಸಂಕ್ಷಿಪ್ತ ಟೆಂಡರ್ ಪ್ರಕಟಣೆ**

**ಪತ್ರ ಸಂಖ್ಯೆ: ಡಿಪಿಎಸ್/ಪಿಯುಆರ್/ಸಿ–60/2008–09, ದಿನಾಂಕ: 1ನೇ ಡಿಸೆಂಬರ್ 2008**

ದಿನಾಂಕ: 01.01.2009 ರಿಂದ 30.06.2010ರ ವರೆಗೆ ಕರ್ನಾಟಕ ರಾಜ್ಯದ ಸರ್ಕಾರಿ ಮುದ್ರಣಾಲಯಗಳಲ್ಲಿರುವ ಡಿ.ಟಿ.ಪಿ. ಉಪಕರಣಗಳು ಮತ್ತು ವಿವಿಧ ಕಾಪಿಯರ್ / ಝುರಾಕ್ಸ್ ಯಂತ್ರಗಳ (ಟೆಂಡರ್ ದಸ್ತಾವೇಜಿನಲ್ಲಿ ವಿವರಿಸಿರುವಂತೆ) ವಾರ್ಷಿಕ ನಿರ್ವಹಣೆ ಮಾಡಲು ಇಚ್ಚಿಸುವ ತಯಾರಿಕಾ / ಸರಬರಾಜುದಾರ ಸಂಸ್ಥೆಗಳಿಂದ ಮೊಹರಾದ ಟೆಂಡರ್‌ಗಳನ್ನು ದ್ವಿಲಕೋಟೆ ಪದ್ಧತಿಯಲ್ಲಿ ಆಹ್ವಾನಿಸಲಾಗಿದೆ. ಟೆಂಡರ್ ಫಾರಂಗಳನ್ನು ಮೇಲ್ಕಂಡ ಕಛೇರಿಯಲ್ಲಿ ರೂ. 200/– + 12.5% ವ್ಯಾಟ್‌ನ್ನು ಪಾವತಿಸಿ ಕಛೇರಿ ವೇಳೆಯಲ್ಲಿ ದಿನಾಂಕ: 30.12.2008 ರ ವರೆಗೆ ಪಡೆಯಬಹುದಾಗಿದೆ. ಟೆಂಡರ್‌ನ ಅಂದಾಜು ಮೌಲ್ಯ ರೂ. 10.00 ಲಕ್ಷ. ಇ.ಎಂ.ಡಿ. ಮೊತ್ತ ರೂ. 30,000/– ಟೆಂಡರ್‌ಗಳನ್ನು ದಿನಾಂಕ:31.12.2008 ರ ಮಧ್ಯಾಹ್ನ 3.00 ಗಂಟೆವರೆಗೆ ಸ್ವೀಕರಿಸಲಾಗುವುದು ಮತ್ತು ಅದೇ ದಿನ 3.00 ಗಂಟೆಗೆ ಕವರ್–1ನ್ನು ತೆರೆಯಲಾಗುವುದು. ಹೆಚ್ಚಿನ ವಿವರಗಳನ್ನು ಕಛೇರಿ ವೇಳೆಯಲ್ಲಿ ಪಡೆಯಬಹುದಾಗಿದೆ.

ನಿರ್ದೇಶಕರು

**OFFICE OF THE DIRECTOR OF PRINTING, STATIONERY & PUBLICATIONS, GOVERNMENT CENTRAL PRESS, R.V. COLLEGE POST, 8TH MILE, MYSORE ROAD, BANGALORE - 560 059**

**BRIEF TENDER NOTIFICATION**

**Letter No. DPS/PUR/C-60/2008-09, Dated: 1st December 2008**

Sealed Tenders are invited in two cover system from the intending Manufacturers and Suppliers for AMC of DTP Equipments and various Copier / Xerox Machines of Government Presses in Karnataka as detailed in the Tender Document for the period from 1.1.2009 to 30.6.2010. Tender Forms may be obtained at the above address by paying Rs. 200/- Plus VAT @ 12.5% by way of cash upto 4-30 pm on 30/12/2008 in this Office. The approximate value of the Tender is Rs. 10.00 Lakhs. The EMD is Rs. 30,000/-. Last date for submission of Tender is 31/12/2008 upto 3-00 pm. Cover-1 will be opened on the same day at 3-00 pm. Further details can be obtained during the Office hours.

P.R. 618 Director

**ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ನಿರ್ದೇಶಕರ ಕಛೇರಿ, ಸರ್ಕಾರಿ ಕೇಂದ್ರ ಮುದ್ರಣಾಲಯ, ಆರ್.ವಿ. ಕಾಲೇಜ್ ಅಂಚೆ, 8ನೇ ಮೈಲಿ, ಮೈಸೂರು ರಸ್ತೆ, ಬೆಂಗಳೂರು – 560 059**

**ಸಂಕ್ಷಿಪ್ತ ಟೆಂಡರ್ ಪ್ರಕಟಣೆ ದಿನಾಂಕ: 29ನೇ ನವೆಂಬರ್ 2008**

ಅರ್ಹ ಹಾಗೂ ಅನುಭವ ಹೊಂದಿರುವ ಸಂಸ್ಥೆಗಳಿಂದ ಈ ಕೆಳಗೆ ಸೂಚಿಸಿರುವ ಯಂತ್ರೋಪಕರಣಗಳ ರಿಪೇರಿ ಮತ್ತು ವಾರ್ಷಿಕ ನಿರ್ವಹಣೆ ಬಗ್ಗೆ, ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999 ರಲ್ಲಿ ಟೆಂಡರ್ ಆಹ್ವಾನಿಸಲಾಗಿದೆ.

| ಕ್ರ. ಸಂ. | ಕೆಲಸದ ವಿವರ | ಅಂದಾಜು ಮೌಲ್ಯ ರೂ. ಲಕ್ಷಗಳಲ್ಲಿ | ಭದ್ರತಾ ಠೇವಣಿ ರೂ. |
|---|---|---|---|
| 1) | **ಟೆಂಡರ್ ಅಧಿಸೂಚನೆ ಸಂಖ್ಯೆ: ಡಿಪಿಎಸ್/ಪಿಯುಆರ್/ಡಿ–155/2008–09**<br>2 ಸಂಖ್ಯೆ, 4 ವರ್ಣದ ಪ್ರಿಂಟ್‌ವೆಲ್ ವೆಬ್ ಆಫ್‌ಸೆಟ್ ಯಂತ್ರಗಳ ರೀ–ಕಂಡೀಷನಿಂಗ್ ನಿರ್ವಹಣೆ ಸ್ಥಳ: ಸರ್ಕಾರಿ ಜಿಲ್ಲಾ ಮುದ್ರಣಾಲಯ, ತುಮಕೂರು | 5.00 ಲಕ್ಷ | 10,000/– |
| 2) | **ಟೆಂಡರ್ ಅಧಿಸೂಚನೆ ಸಂಖ್ಯೆ: ಡಿಪಿಎಸ್/ಪಿಯುಆರ್/ಡಿ–163/2008–09**<br>ರಿಪೇರಿ, ಸರ್ವಿಸ್ ಮತ್ತು ವಾರ್ಷಿಕ ನಿರ್ವಹಣೆಗಾಗಿ 6 ಸಂಖ್ಯೆ, ಪ್ಲಾನ್‌ಟಾ ಆಫ್‌ಸೆಟ್ ಯಂತ್ರ ಮತ್ತು ಒಂದು ಎ1 ಅಳತೆ ಅಶೋಕಾ ವೆಬ್ ಆಫ್‌ಸೆಟ್ ಯಂತ್ರ,<br>ಸ್ಥಳ: ಪಠ್ಯ ಪುಸ್ತಕ ಮುದ್ರಣಾಲಯ, ಮೈಸೂರು | 7.2 ಲಕ್ಷ | 15,000/– |
| 3) | **ಟೆಂಡರ್ ಅಧಿಸೂಚನೆ ಸಂಖ್ಯೆ: ಡಿಪಿಎಸ್/ಪಿಯುಆರ್/ಡಿ–168/2008–09**<br>ಸರ್ವಿಸ್ ಮತ್ತು ವಾರ್ಷಿಕ ನಿರ್ವಹಣೆಗಾಗಿ 3 ಸಂಖ್ಯೆ, ಏಕವರ್ಣದ ಮತ್ತು 5 ಸಂಖ್ಯೆ, 4 ವರ್ಣದ ಎ2 ಅಳತೆಯ ಪ್ರಿಂಟ್‌ವೆಲ್ ವೆಬ್ ಆಫ್‌ಸೆಟ್ ಯಂತ್ರ ಮತ್ತು 4 ಸಂ. ಹೆಚ್.ಎಂ.ಟಿ ಆಫ್‌ಸೆಟ್ ಯಂತ್ರ,<br>ಸ್ಥಳ: ಸರ್ಕಾರಿ ಜಿಲ್ಲಾ ಮುದ್ರಣಾಲಯ, ತುಮಕೂರು | 6.5 ಲಕ್ಷ | 12,000/– |
| 4) | **ಟೆಂಡರ್ ಅಧಿಸೂಚನೆ ಸಂಖ್ಯೆ: ಡಿಪಿಎಸ್/ಪಿಯುಆರ್/ಡಿ–169/2008–09**<br>ಸರ್ವಿಸ್ ಮತ್ತು ವಾರ್ಷಿಕ ನಿರ್ವಹಣೆಗಾಗಿ 4 ಸಂಖ್ಯೆ, ಹೆಚ್.ಎಂ.ಟಿ. ಆಫ್‌ಸೆಟ್ ಯಂತ್ರ, 2 ಸಂಖ್ಯೆ ಎ2 ಅಳತೆ ಅಶೋಕಾ ಆಫ್‌ಸೆಟ್ ವೆಬ್ ಯಂತ್ರ,<br>ಸ್ಥಳ: ಸರ್ಕಾರಿ ವಿಭಾಗೀಯ ಮುದ್ರಣಾಲಯ, ಧಾರವಾಡ | 3.5 ಲಕ್ಷ | 8,000/– |
| 5) | **ಟೆಂಡರ್ ಅಧಿಸೂಚನೆ ಸಂಖ್ಯೆ: ಡಿಪಿಎಸ್/ಪಿಯುಆರ್/ಡಿ–170/2008–09**<br>ಸರ್ವಿಸ್ ಮತ್ತು ವಾರ್ಷಿಕ ನಿರ್ವಹಣೆಗಾಗಿ 4 ಸಂಖ್ಯೆ, ಹೆಚ್.ಎಂ.ಟಿ. ಆಫ್‌ಸೆಟ್ ಯಂತ್ರ, ಒಂದು ಎ1 ಅಳತೆ ಅಶೋಕಾ ವೆಬ್ ಆಫ್‌ಸೆಟ್ ಯಂತ್ರ, ಮತ್ತು ಎ2 ಅಳತೆ ಅಶೋಕಾ ವೆಬ್ ಆಫ್‌ಸೆಟ್ ಯಂತ್ರ<br>ಸ್ಥಳ: ಸರ್ಕಾರಿ ವಿಭಾಗೀಯ ಮುದ್ರಣಾಲಯ, ಗುಲ್ಬರ್ಗಾ | 3.00 ಲಕ್ಷ | 6,000/– |

ಇನ್ನು ಹೆಚ್ಚಿನ ವಿವರಗಳಿಗೆ ಸರ್ಕಾರದ ಅಧೀನ ಕಾರ್ಯದರ್ಶಿಗಳು, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ), ಇವರನ್ನು ಕಛೇರಿ ವೇಳೆಯಲ್ಲಿ ಖುದ್ದಾಗಿ ಅಥವಾ ದೂರವಾಣಿ ಸಂಖ್ಯೆ 22033440 ಅಥವಾ 22033971 ರಲ್ಲಿ ಸಂಪರ್ಕಿಸಬಹುದು.

**ಕೆ.ಎಸ್. ಮಂಜುನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ)

**ಅನುಬಂಧ**

ಟೆಂಡರ್ ಪ್ರಕಟಣೆ ಸಂಖ್ಯೆ:

ಕಾಪಿಯರ್ : ಡಿಜಿಟಲ್ ಕಾಪಿಯರ್ : ಡೂಪ್ಲಿಕೇಟರ್
ಯಂತ್ರಗಳ ವಾರ್ಷಿಕ ಸೇವಾ ನಿರ್ವಹಣೆಗೆ ದರ

ಸಿಆಸುಇ 28 ಡಿಟಿಎಂ 2008

| **ಕ್ರ. ಸಂ.** | **ಯಂತ್ರದ ಮಾದರಿ** | **ದರಗಳ ಒಂದಕ್ಕೆ** | **ತೆರಿಗೆ** (%) |
|---|---|---|---|
| 1 | ಶಾರ್ಪ್ ಎಆರ್ ಎಂ 205 | | |

ಟೆಂಡರ್‌ದಾರರ ಸಹಿ
(ಪೂರ್ಣ ಹೆಸರು ವಿಳಾಸ ಮೊಹರಿನೊಂದಿಗೆ)

**ಕೆ.ಎಸ್. ಮಂಜುನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿಗಳು,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ)

ಪಿ.ಆರ್. 642

**IN THE COURT OF THE IV ADDL CITY CIVIL JUDGE, BANGALORE**

**P. & S.C. No.25046/2008**

**Between:**
Sri Ramesh, @ Parashurama,
S/o Muninanjappa,
Grand Son of Smt. Muniyellamma,
Aged about 43 years,
Residing at Bilekahalli,
Bannerghatta Road, Bangalore-560 076 : Petitioner
And :
Nil : Respondent

**PUBLIC NOTICE**

Whereas the above named petitioner has filed the above petition in the court Hall No.-21, Under Section 272 of the Indian Succession Act, 1925, prayed for issuance of Probate in respect of the Schedule Properties described hereinbelow, which are left by his deceased Grand-mother Smt. Muniyellamma, through a Will dated 28.11.2007, and she died on 18.10.2008, at Bangalore. No caveat has been filed Any persons who are interested may appear before this Hon'ble Court in person or by a pleader duly instructed and able to answer all material questions relating to the case on 17.01.2009 at 11.00 A.M. the day fixed for your appearance, failing which the matter will be heard and determined ex-parte.

**SCHEDULE**

**Item No.1:**

All that piece and parcel of the land bearing Sy.No.7, measuring 10 Guntas, of Kariyammana Agrahara Village, Varthur Hobli, Bangalore South Taluk, Now East Taluk and bounded on;

| | | |
|---|---|---|
| East By | : | Road, |
| West By | : | Private Property, |
| North By | : | Private Property, |
| South By | : | Private Property, |

**Item No.2:**

All that piece and parcel of the land bearing Sy.No.14, measuring 38 Guntas, of Kariyammana Agrahara Village, Varthur Hobli, Bangalore South Taluk, Now East Taluk and bounded on ;

| | | |
|---|---|---|
| East By | : | Chinnakkaiah's Property, |
| West By | : | Private Property, |
| North By | : | Raja Kaluve, |
| South By | : | Private Property, |

**Item No.3:**

All that piece and parcel of the land bearing Sy.No.28, now 28/2, measuring 1 Acre, of Kariyammana Agrahara Village, Varthur Hobli, Bangalore South Taluk, Now East Taluk and bounded on ;

| | | |
|---|---|---|
| East By | : | Government Road, |
| West By | : | Venkatappa and Muniraju's Property |
| North By | : | Private Property |
| South By | : | Private Property, |

**Item No.4:**

All that piece and parcel of the land bearing Sy.No.35, measuring 10 Guntas, of Kariyammana Agrahara Village, Varthur Hobli, Bangalore South Taluk, Now East Taluk and bounded on ;

| | | |
|---|---|---|
| East By | : | Road, |
| West By | : | Private Property now School,, |
| North By | : | Private Property, |
| South By | : | Private Property, |

Given under my hand and the seal of the Court this 12th day of Dec 2008, at Bangalore.

By the Order of the Court
Assistant Registrar
Court of the City Civil Judge,
Bangalore.

P.D. 122

**IN THE COURT OF THE III ADDL FAMILY JUDGE, AT BENGALURU**

**G & W C No. 40/2008**

**PETITIONERS**

1. **MASTER ALVIN ANTONIO CHARLES,**
   S/o C. Charles Sampath,
   Aged about 17 years,
2. **MASTER. BRENDON FABIAN CHARLES,**
   S/o C.Charles Sampath,
   Aged about 14 years,
3. **MISS. DANIELLA PRIYANKA CHARLES,**
   S/o C. Charles Sampath, Aged about 8 years,
   Aged about 8 years,
   Petitioner No.1 to 3 being minors,
   duly represented by their father and natural guardian,

**Mr.C.CHARLES SAMPATH,**
S/o G.P.M Chelladurai,
Aged about 49 years,
**Mr.C.CHARLES SAMPATH,**
S/o G.P.M. Chelladurai,
Aged about 49 years, All residing at No.292,
1st Cross, 1st floor, Cambridge Layout, Ulsoor,
Bengaluru-560008

**V/S**

**RESPONDENT** **NIL,**

**NOTIFICATION**

Whereas the Petitioners in the above case have instituted the above Guardian & Wards Petition for the appointing fourth petitioner Sri C.Charles Sampath, as court guardian of the Petitioner No.1 to 3 and permit the fourth Petitioner to receive the benefits devolved upon the minor Petitioner No.1 to 3.

Therefore any person/s, objections if any regarding in this matter they may file an objection in this regard and hereby directed to appear before the IIIrd Addl, Family Judge, at Bengaluru in person on the 13th January 2009, at 11.00 a.m. to answer the said petition, failing which the G & WC petition will be allowed, as prayed for by the petitioner's.

Given under my hand and the seal of the court on this 16th day of December 2008.

By Order of the Court
Chief Ministrial officer
Family Court, Bangalore-27

P.D. 123

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ**

**ಟೆಂಡರ್ ಅಧಿಸೂಚನೆ**

**ಸಂಖ್ಯೆ: ಸಿಆಸುಇ 21 ಡಿಎಸ್‌ಡಬ್ಲ್ಯೂ 2008, ಬೆಂಗಳೂರು, ದಿನಾಂಕ: 4ನೇ ಡಿಸೆಂಬರ್ 2008**

**ವಿಷಯ:** ವಿಕಾಸಸೌಧ ಕಟ್ಟಡದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯ ಉಪಾಹಾರ ಮಂದಿರವನ್ನು ನಡೆಸಲು ಗುತ್ತಿಗೆ ನೀಡುವ ಬಗ್ಗೆ.

| | | |
|---|---|---|
| ಟೆಂಡರ್‌ಗಳನ್ನು ಸಲ್ಲಿಸಬೇಕಾದ ವಿಳಾಸ | : | ಸರ್ಕಾರದ ಉಪ ಕಾರ್ಯದರ್ಶಿ<br>ಸಿಆಸುಇ (ಕಾರ್ಯಕಾರಿ)<br>ಕೊಠಡಿ ಸಂಖ್ಯೆ: 23, ನೆಲಮಹಡಿ<br>ವಿಧಾನಸೌಧ, ಬೆಂಗಳೂರು-560 001 |
| ಟೆಂಡರ್ ಸಲ್ಲಿಸಲು ಕೊನೆಯ ದಿನಾಂಕ | : | 29–12–2008 ರ ಮಧ್ಯಾಹ್ನ 3–00 ಗಂಟೆಯವರೆಗೆ |
| ಟೆಂಡರ್ ನಮೂನೆಯ ದರ | : | ರೂ. 1000 + 125 ಮೌಲ್ಯವರ್ಧಿತ ತೆರಿಗೆ = ಒಟ್ಟು ರೂ. 1125/- |

1) ವಿಕಾಸಸೌಧ ಕಟ್ಟಡದಲ್ಲಿರುವ ಕರ್ನಾಟಕ ಸರ್ಕಾರ ಸಚಿವಾಲಯ ಉಪಾಹಾರ ಮಂದಿರವನ್ನು ದಿನಾಂಕ: 15.01.2009ರಿಂದ ದಿನಾಂಕ: 14–01–2010ರ ಒಂದು ವರ್ಷದ ಅವಧಿಗೆ ನಡೆಸಲು ಗುತ್ತಿಗೆ ನೀಡಲು ಟೆಂಡರ್‌ನ್ನು ಕರೆಯಲಾಗಿದೆ.
2) ವಿಕಾಸಸೌಧದ ಉಪಾಹಾರ ಮಂದಿರವನ್ನು ನಡೆಸಲು ಟೆಂಡರ್ ಸಲ್ಲಿಸುವವರು ಟೆಂಡರ್‌ನೊಂದಿಗೆ ರೂ.75,000/– (ರೂಪಾಯಿ ಎಪ್ಪತ್ತೈದು ಸಾವಿರಗಳು ಮಾತ್ರ)ರ ಮುಂಗಡ ಠೇವಣಿ ಹಣಕ್ಕೆ ಬ್ಯಾಂಕ್ ಡ್ರಾಫ್ಟ್‌ನ್ನು ಸಲ್ಲಿಸತಕ್ಕದ್ದು.
3) ಈ ಬ್ಯಾಂಕ್ ಡ್ರಾಫ್ಟ್‌ನ್ನು "ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಲೆಕ್ಕಪತ್ರ), ಬೆಂಗಳೂರು" ಇವರ ಹೆಸರಿಗೆ ಬರೆಯತಕ್ಕದ್ದು
4) ಮುಂಗಡ ಠೇವಣಿ ಹಣದ ಸಂಬಂಧ ಬ್ಯಾಂಕ್ ಡ್ರಾಫ್ಟ್‌ನ್ನು ಟೆಂಡರ್ ಜೊತೆಗೆ ಸಲ್ಲಿಸದಿದ್ದಲ್ಲಿ ನೀಡಿರುವ ಟೆಂಡರ್‌ನ್ನು ತಿರಸ್ಕರಿಸಲಾಗುವುದು

5) ಮೊಹರು ಮಾಡಿದ ಟೆಂಡರ್ ಲಕೋಟೆಗಳನ್ನು ದಿನಾಂಕ: 29-12-2008ರ ಮಧ್ಯಾಹ್ನ 3-00 ಗಂಟೆಯೊಳಗಾಗಿ ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಕಾರ್ಯಕಾರಿ), ಕೊಠಡಿ ಸಂಖ್ಯೆ: 23, ವಿಧಾನಸೌಧ, ಬೆಂಗಳೂರು, ಇವರಿಗೆ ಸಲ್ಲಿಸತಕ್ಕದ್ದು.

6) ದಿನಾಂಕ: 30-12-2008ರ ಮಧ್ಯಾಹ್ನ 4-00 ಗಂಟೆಗೆ ಸರ್ಕಾರದ ಉಪ ಕಾರ್ಯದರ್ಶಿ, ಸಿಆಸುಇ (ಕಾರ್ಯಕಾರಿ), ಕೊಠಡಿ ಸಂಖ್ಯೆ:23, ವಿಧಾನಸೌಧ, ಬೆಂಗಳೂರು, ಇವರ ಕೊಠಡಿಯಲ್ಲಿ ಟೆಂಡರ್‌ನ್ನು ತೆರೆಯಲಾಗುವುದು. ಟೆಂಡರನ್ನು ತೆರೆಯುವ ಸಮಯದಲ್ಲಿ ಟೆಂಡರ್‌ದಾರರು ಅಥವಾ ಅವರ ಅಧಿಕೃತ ಪ್ರತಿನಿಧಿ ಹಾಜರಿರಬಹುದು. ಟೆಂಡರ್ ತೆರೆಯುವ ದಿನವು ಯಾವುದಾದರೂ ಸಾರ್ವತ್ರಿಕ ರಜಾ ದಿನವಾಗಿದ್ದಲ್ಲಿ, ಟೆಂಡರನ್ನು ಮಾರನೇ ಕರ್ತವ್ಯದ ದಿನದಂದು ಅದೇ ವೇಳೆ ಮತ್ತು ಸ್ಥಳದಲ್ಲಿ ತೆರೆಯಲಾಗುವುದು.

7) ಟೆಂಡರ್ ನಮೂನೆಯ ದರ ರೂ. 1125-00ಕ್ಕೆ ಬ್ಯಾಂಕ್ ಡ್ರಾಫ್ಟ್‌ನ್ನು ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಲೆಕ್ಕಪತ್ರ) ಇವರ ಹೆಸರಿಗೆ ಪಡೆದುಕೊಂಡು, ಟೆಂಡರ್ ನಮೂನೆಯನ್ನು ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಕಾರ್ಯಕಾರಿ) ಕೊಠಡಿ ಸಂಖ್ಯೆ: 23, ನೆಲಮಹಡಿ, ವಿಧಾನಸೌಧ, ಬೆಂಗಳೂರು, ಇವರಿಂದ ಪಡೆಯಬಹುದಾಗಿದೆ. ಟೆಂಡರ್‌ನ್ನು ಒಪ್ಪಿಕೊಳ್ಳುವ ಅಂತಿಮ ಅಧಿಕಾರವನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಆಸುಇ (ಆಡಳಿತ ಸುಧಾರಣೆ), ಇವರು ಹೊಂದಿರುತ್ತಾರೆ.

8) ಈ ಉಪಾಹಾರ ಮಂದಿರವನ್ನು ಅಂಶ-1ರಲ್ಲಿ ಹೇಳಿರುವಂತೆ 1 (ಒಂದು) ವರ್ಷದ ಅವಧಿಗೆ ಮಾತ್ರ ನಡೆಸಲು ಅನುಮತಿ ನೀಡಲಾಗುವುದು ಹಾಗೂ ಯಾವುದೇ ಹಂತದಲ್ಲಿ 30 ದಿನಗಳ ನೋಟೀಸ್‌ನ್ನು ನೀಡುವ ಮೂಲಕ ಈ ಗುತ್ತಿಗೆಯನ್ನು ರದ್ದುಗೊಳಿಸುವ ಅಧಿಕಾರವನ್ನು ಸರ್ಕಾರ ಹೊಂದಿರುತ್ತದೆ.

9) ಸದರಿ ಟೆಂಡರ್‌ಗಳ ಲಕೋಟೆಯ ಮೇಲೆ "ಕರ್ನಾಟಕ ಸರ್ಕಾರ ಸಚಿವಾಲಯದ ವಿಕಾಸಸೌಧ ಉಪಾಹಾರ ಮಂದಿರದ ಟೆಂಡರ್" ಎಂದು ನಮೂದಿಸಿರತಕ್ಕದ್ದು.

10) ಟೆಂಡರ್‌ದಾರರು ತಮ್ಮ ಟೆಂಡರ್‌ನಲ್ಲಿ ಪೂರ್ಣ ಹೆಸರಿನೊಂದಿಗೆ ಸಹಿ ಹಾಕಿರಬೇಕು. ಅದು ಒಂದು ಸಂಸ್ಥೆಯ ಪರವಾಗಿ ಹಾಕಿದ್ದಲ್ಲಿ, ವ್ಯವಸ್ಥಾಪಕ ಪಾಲುದಾರರ ಹೆಸರುಗಳನ್ನು ನಮೂದಿಸಿರಬೇಕು.

11) ಪ್ರತಿಯೊಬ್ಬ ಟೆಂಡರುದಾರನು ತನ್ನ ವಾಸ ಸ್ಥಳ ಹಾಗೂ ಅಂಚೆ ವಿಳಾಸವನ್ನು ಸ್ಪಷ್ಟವಾಗಿ ಟೆಂಡರ್‌ನಲ್ಲಿ ನಮೂದಿಸತಕ್ಕದ್ದು.

12) ಅಯಶಸ್ವಿ ಟೆಂಡರ್‌ದಾರರ ಮುಂಗಡ ಠೇವಣಿ ಹಣವನ್ನು ಬಡ್ಡಿರಹಿತವಾಗಿ ಹಿಂದಿರುಗಿಸಲಾಗುವುದು.

13) ಯಶಸ್ವಿ ಟೆಂಡರ್‌ದಾರರ ಮುಂಗಡ ಹಣವನ್ನು ಭದ್ರತಾ ಠೇವಣಿಯನ್ನಾಗಿ ಪರಿಗಣಿಸಿ ಸರ್ಕಾರಿ ಲೆಕ್ಕಕ್ಕೆ ಜಮಾ ಮಾಡಲಾಗುವುದು. ಟೆಂಡರ್ ಅವಧಿ ಮುಗಿದ ನಂತರ ಸರ್ಕಾರಕ್ಕೆ ಟೆಂಡರುದಾರರಿಂದ ಯಾವುದೇ ಬಾಕಿ ಇಲ್ಲದಿದ್ದಲ್ಲಿ, ಭದ್ರತಾ ಠೇವಣಿಯನ್ನು ಬಡ್ಡಿರಹಿತವಾಗಿ ಹಿಂದಿರುಗಿಸಲಾಗುವುದು.

14) ಪ್ರತಿಯೊಂದು ಆಹಾರ ಪದಾರ್ಥಗಳು, ಕಾಫಿ, ಟೀ ಇತ್ಯಾದಿಗಳಿಗೆ ಈ ಟೆಂಡರ್ ಅಧಿಸೂಚನೆಯಲ್ಲಿ ನಿಗದಿಪಡಿಸಿರುವ ದರ ಮತ್ತು ಪ್ರಮಾಣದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯ, ಕರ್ನಾಟಕ ವಿಧಾನಸಭೆ ಸಚಿವಾಲಯ ಮತ್ತು ಕರ್ನಾಟಕ ವಿಧಾನ ಪರಿಷತ್ ಸಚಿವಾಲಯದ ಅಧಿಕಾರಿ : ನೌಕರರಿಗೆ ಟೆಂಡರ್‌ದಾರರು ಸರಬರಾಜು ಮಾಡತಕ್ಕದ್ದು. ಇತರರಿಗೆ ಸರಬರಾಜು ಮಾಡಲು ಟೆಂಡರ್‌ದಾರರೇ ದರಗಳನ್ನು ನಿಗದಿಪಡಿಸಬಹುದು.

15) ವಿಕಾಸಸೌಧದ ಉಪಾಹಾರ ಮಂದಿರಕ್ಕೆ ಸಂಬಂಧಿಸಿದಂತೆ ಕನಿಷ್ಠ ಮಾಸಿಕ ರೂ.27,000/- (ರೂಪಾಯಿ ಇಪ್ಪತ್ತೇಳು ಸಾವಿರಗಳು ಮಾತ್ರ) ಬಾಡಿಗೆಯನ್ನು ನಿಗದಿಪಡಿಸಲಾಗಿದೆ. ಅದಕ್ಕಿಂತ ಕಡಿಮೆ ಬಾಡಿಗೆಯನ್ನು ನಮೂದಿಸಿದಲ್ಲಿ ಅಂತಹ ಟೆಂಡರ್‌ನ್ನು ಪರಿಗಣಿಸಲಾಗುವುದಿಲ್ಲ.

16) ಟೆಂಡರ್‌ದಾರರು 2008ನೇ ಸಾಲಿನಲ್ಲಿ ಮಹಾನಗರ ಪಾಲಿಕೆ/ನಗರಸಭೆ ಮತ್ತು ಕಾರ್ಮಿಕ ಇಲಾಖೆ ಇವರಿಂದ ಪಡೆದಿರುವ ಪ್ರಮಾಣಪತ್ರ ಹಾಗೂ ಉಪಾಹಾರ ಮಂದಿರದ ನೌಕರರಿಗೆ ಸಂಬಂಧಿಸಿದಂತೆ 2008ನೇ ಸಾಲಿನಲ್ಲಿ ಇತ್ತೀಚೆಗೆ ಇ.ಎಸ್.ಐ.(E.S.I.) ಮತ್ತು ಪ್ರಾವಿಡೆಂಟ್ ಫಂಡ್‌ನ್ನು ಪಾವತಿಸಿರುವ ರಶೀದಿ ಇತ್ಯಾದಿ ಅವಶ್ಯಕ ದೃಢೀಕೃತ ದಾಖಲೆಗಳನ್ನು ಹಾಜರುಪಡಿಸತಕ್ಕದ್ದು. ಟೆಂಡರ್ ತೆರೆಯುವ ಸಮಯದಲ್ಲಿ ಟೆಂಡರ್‌ದಾರರು ಆಕ್ಷೇಪಣೆ ವ್ಯಕ್ತಪಡಿಸಿದಲ್ಲಿ ಮಹಾನಗರ ಪಾಲಿಕೆಯಿಂದ ಪಡೆದಿರುವ ಮೂಲ ಪ್ರಮಾಣಪತ್ರವನ್ನು ಒದಗಿಸತಕ್ಕದ್ದು.

17) ಯಶಸ್ವಿ ಟೆಂಡರ್‌ದಾರರು ಅಡುಗೆ ತಯಾರಿಸುವುದಕ್ಕಾಗಿ ಹಾಗೂ ಸರಬರಾಜು ಮಾಡುವುದಕ್ಕಾಗಿ ತಮ್ಮದೇ ಆದ ಅಡುಗೆ ಪಾತ್ರೆಗಳನ್ನು ಹಾಗೂ ಇತರೆ ವಸ್ತುಗಳನ್ನು ವ್ಯವಸ್ಥೆ ಮಾಡಿಕೊಳ್ಳತಕ್ಕದ್ದು.

18) ನಿಗದಿಪಡಿಸಿದ ಅರ್ಜಿ ನಮೂನೆಯಲ್ಲಿ ಹಾಗೂ ನಿಗದಿತ ದಿನಾಂಕ ಮತ್ತು ಸಮಯದೊಳಗೆ ಸಲ್ಲಿಸದೇ ಇರುವ ಟೆಂಡರ್‌ನ್ನು ತಿರಸ್ಕರಿಸಲಾಗುವುದು.

19) ದಿನಾಂಕ: 27-12-2008ರ ಮಧ್ಯಾಹ್ನ 3-00 ಗಂಟೆಯವರೆಗೆ ಮಾತ್ರ ಟೆಂಡರ್ ಅರ್ಜಿಗಳನ್ನು ಮಾರಾಟ ಮಾಡಲಾಗುವುದು.

20) ನಿಗದಿಪಡಿಸಿದ ನಮೂನೆಯ ನಿಗದಿತ ಪಟ್ಟಿಯಲ್ಲಿನ ಯಾವುದೇ ಮಾರ್ಪಾಡುಗಳನ್ನು ಮಾಡಿರುವ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.

21) ಯಶಸ್ವಿ ಟೆಂಡರುದಾರರು ಕರಾರು ಒಪ್ಪಂದ ಪತ್ರವನ್ನು ಆದೇಶ ಹೊರಡಿಸಿದ ದಿನಾಂಕದಿಂದ ಒಂದು ವಾರದೊಳಗೆ ನಿಗದಿತ ಮೌಲ್ಯದ ಛಾಪಾ ಕಾಗದದಲ್ಲಿ ಸಹಿ ಹಾಕಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು. ಈ ಅವಧಿಯೊಳಗೆ ನಿಗದಿತ ಕರಾರು ಒಪ್ಪಂದ ಪತ್ರಕ್ಕೆ ಸಹಿ ಹಾಕಿ ಸಲ್ಲಿಸಲು ವಿಫಲರಾದಲ್ಲಿ ಅವರು ಸಲ್ಲಿಸಿರುವ ಮುಂಗಡ ಠೇವಣಿ ಹಣವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

22) ಮೂರು ವರ್ಷಕ್ಕೂ ಮೇಲ್ಪಟ್ಟು ಉಪಾಹಾರ ಮಂದಿರವನ್ನು ನಡೆಸಿರುವ ಬಗ್ಗೆ ಅನುಭವದ ಪ್ರಮಾಣಪತ್ರ ಹಾಗೂ ದಾಖಲೆಗಳನ್ನು ನೀಡತಕ್ಕದ್ದು ಮತ್ತು ಈಗ ನಡೆಸುತ್ತಿರುವ ಉಪಾಹಾರ ಮಂದಿರಕ್ಕೆ ಸಂಬಂಧಿಸಿದಂತೆ 2006–2007ನೇ ಸಾಲಿನಲ್ಲಿ ಆದಾಯ ತೆರಿಗೆ ಪಾವತಿ ಮಾಡಿರುವ(ಸರಳ್) ದೃಢೀಕರಣ ಪತ್ರ ಮತ್ತು ಅಕ್ಟೋಬರ್–2008ನೇ ತಿಂಗಳಿನಲ್ಲಿ ಮಾರಾಟ ತೆರಿಗೆ ಪಾವತಿ ಮಾಡಿರುವ ರಶೀದಿಯನ್ನು ಟೆಂಡರ್‌ದಾರರು ಟೆಂಡರ್‌ನೊಂದಿಗೆ ಒದಗಿಸತಕ್ಕದ್ದು.

23) ಯಾವುದೇ ವ್ಯಾಜ್ಯ ಉಂಟಾದಲ್ಲಿ ಈ ಬಗ್ಗೆ ತೀರ್ಮಾನ ತೆಗೆದುಕೊಳ್ಳಲು ಬೆಂಗಳೂರಿನಲ್ಲಿರುವ ನ್ಯಾಯಾಲಯಗಳಿಗೆ ಮಾತ್ರ ಅಧಿಕಾರ ಇದೆ.

24) ಉಪಾಹಾರ ಮಂದಿರವನ್ನು ಸ್ವಚ್ಛವಾಗಿ ಇಡುವುದಲ್ಲದೇ, ಸೋಂಕು ರೋಗ, ಇಲಿ, ನೊಣ, ಸೊಳ್ಳೆ ಇತ್ಯಾದಿ ಸಮಸ್ಯೆಗಳು ಉಂಟಾಗದಂತೆ ದಿನಂಪ್ರತಿ ಔಷಧಿಯನ್ನು ಸಿಂಪಡಿಸತಕ್ಕದ್ದು

25) ಇಲ್ಲಿ ನೀಡುವ ತಿಂಡಿ-ತಿನಿಸು, ಆಹಾರ ಪದಾರ್ಥಗಳನ್ನು ತಿಂದು ಯಾರಾದರೂ ಗ್ರಾಹಕರು ಅಸ್ವಸ್ಥರಾದರೆ, ಅದರಿಂದ ಉಂಟಾಗುವ ಪರಿಣಾಮಗಳಿಗೆ ಉಪಾಹಾರ ಮಂದಿರದ ಮಾಲೀಕರೇ ಸಂಪೂರ್ಣ ಜವಾಬ್ದಾರರಾಗಿರುತ್ತಾರೆ. ತಿಂಡಿ–ತಿನಿಸುಗಳಿಗೆ ಯಾವುದೇ ರಾಸಾಯನಿಕ ಬಣ್ಣ ಬಳಸಬಾರದು.

26) ಉಪಾಹಾರ ಮಂದಿರ ನಡೆಸುವಲ್ಲಿ ಸಂಪೂರ್ಣ ಜವಾಬ್ದಾರಿ ವಹಿಸಿಕೊಳ್ಳುವ ವ್ಯಕ್ತಿಯ ಹೆಸರು ಮತ್ತು ಯಾವುದೇ ತಪ್ಪು ಕೆಲಸ, ಅವ್ಯವಸ್ಥಿತ ನಿರ್ವಹಣೆ ಅಥವಾ ಅಪಘಾತವಾದಲ್ಲಿ ಇದಕ್ಕೆ ಸಂಬಂಧಿಸಿದಂತೆ ಸಂಪೂರ್ಣ ಜವಾಬ್ದಾರಿ ಹೊತ್ತು ಸೂಕ್ತ ಪರಿಹಾರ ನೀಡುವ ಮಾಲೀಕರ / ಪಾಲುದಾರರ ಅಥವಾ ಸಂಸ್ಥೆಯ ಜವಾಬ್ದಾರಿಯುತ ಪ್ರತಿನಿಧಿಯ ಹೆಸರು ಮತ್ತು ವಿಳಾಸವನ್ನು ನಮೂದಿಸತಕ್ಕದ್ದು.

27) ಟೆಂಡರ್‌ಗಳನ್ನು ಯಾವುದೇ ಕಾರಣ ನೀಡದೆ ತಿರಸ್ಕರಿಸುವ ಹಕ್ಕನ್ನು ಸರ್ಕಾರ ಕಾಯ್ದಿರಿಸಿದೆ.

28) ವಿಕಾಸಸೌಧದಲ್ಲಿನ ಉಪಾಹಾರ ಮಂದಿರದ ವಿದ್ಯುತ್ ಮತ್ತು ನೀರಿನ ಬಿಲ್ಲುಗಳ ಸಂಪೂರ್ಣ ವೆಚ್ಚವನ್ನು ಯಶಸ್ವಿ ಗುತ್ತಿಗೆದಾರರೇ ಪಾವತಿ ಮಾಡತಕ್ಕದ್ದು.

29) ವಿಕಾಸಸೌಧ ಕಟ್ಟಡದ 1ನೇ ಮಹಡಿಯಲ್ಲಿನ ಉಪಾಹಾರ ಮಂದಿರದಲ್ಲಿ ಒಟ್ಟು 2,623 ಚದರಡಿ ವಿಸ್ತೀರ್ಣದ ಸ್ಥಳಾವಕಾಶವಿರುತ್ತದೆ. ತಿಂಡಿಗಳನ್ನು ತಯಾರಿಸಲು ಬಹುಮಹಡಿ ಕಟ್ಟಡದಲ್ಲಿ ಮೂಲಭೂತ ಸೌಕರ್ಯವಿರುವ 560 ಚದರಡಿಗಳ ವಿಸ್ತೀರ್ಣ ಇರುವ ಅಡುಗೆ ಕೋಣೆ ಸೌಲಭ್ಯವನ್ನು ನೀಡಲಾಗುವುದು. ಟೆಂಡರ್‌ದಾರರು ಟೆಂಡರ್ ಸಲ್ಲಿಸುವ ಮುನ್ನ ಬಹುಮಹಡಿ ಕಟ್ಟಡದಲ್ಲಿರುವ ಅಡುಗೆ ಕೋಣೆಯನ್ನು ಪರಿವೀಕ್ಷಣೆ ಮಾಡಬಹುದು.

30) ಕರ್ನಾಟಕ ಸರ್ಕಾರ ಸಚಿವಾಲಯ, ವಿಧಾನಸಭೆ ಸಚಿವಾಲಯ ಮತ್ತು ವಿಧಾನ ಪರಿಷತ್ತಿನ ಸಚಿವಾಲಯದ ಸಿಬ್ಬಂದಿಗೆ ಅವರು ಗುರುತಿನ ಚೀಟಿಯನ್ನು ತೋರಿಸಿದಲ್ಲಿ ಈ ಕೆಳಗಿನ ತಿಂಡಿ-ತಿನಿಸು, ಕಾಫೀ, ಟೀ ಇತ್ಯಾದಿಗಳನ್ನು ಅವುಗಳ ಮುಂದೆ ನಿಗದಿಪಡಿಸಿರುವ ಪ್ರಮಾಣ ಮತ್ತು ದರದಲ್ಲಿ ಒದಗಿಸತಕ್ಕದ್ದು.

| ಕ್ರ ಸಂ. | ಕಾಫೀ, ಟೀ, ತಿಂಡಿ ಇತ್ಯಾದಿಗಳ ಹೆಸರು | ಪ್ರಮಾಣ | ದರ ರೂ. |
|---|---|---|---|
| 01 | ಇಡ್ಲಿ (ಎರಡಕ್ಕೆ) | 75 gm. | 5/- |
| 02 | ರವೆ ಇಡ್ಲಿ | 125gm | 8/- |
| 03 | ಖಾರಾಬಾತ್ | 100gm | 4/- |
| 04 | ಚೌಚೌ ಬಾತ್ | 200gm | 8/- |
| 05 | ಪಕೋಡ | 100gm | 7/- |
| 06 | ರೈಸ್ ಬಾತ್ | 300gm | 6/- |
| 07 | ಅನ್ನ ಸಾಂಬಾರ್ | 325gm | 5/- |
| 08 | ಮಸಾಲಾ ದೋಸೆ | 250gm | 8/- |

| | | | |
|---|---|---|---|
| 09 | ಸೆಟ್ ದೋಸೆ | 250gm | 8/- |
| 10 | ಪೂರಿ | 250gm | 10/- |
| 11 | ಕಾಫಿ/ಟೀ | 100 ಔನ್ಸ್ | 3.50/- |
| 12 | ಬೋಂಡಾ | 100gm | 7/- |
| 13 | ಲಂಚ್ (ಅನ್ನ, ಸಾಂಬಾರ್, ರಸಮ್, ಮೊಸರು, ಪಲ್ಯ, ಚಪಾತಿ/ಪೂರಿ/ರಾಗಿ ಮುದ್ದೆ) | 500 gm | 15/- |
| 14 | ಉದ್ದಿನ ವಡೆ | 100 gm | 5/- |
| 15 | ಮಸಾಲೆ ವಡೆ | 150 gm | 7/- |

34) ಉಪಾಹಾರ ಮಂದಿರ ಮತ್ತು ಅದರ ಆವರಣದಲ್ಲಿ ಇನ್ನ್ಯಾವುದೇ ವಾಣಿಜ್ಯ ಚಟುವಟಿಕೆಗಳನ್ನು ನಡೆಸುವಂತಿಲ್ಲ

35) ಯಶಸ್ವಿ ಟೆಂಡರ್‌ದಾರರು ಯಾವ ಕಾರಣಕ್ಕೂ ತಾವು ಗುತ್ತಿಗೆ ಪಡೆದ ಉಪಾಹಾರ ಮಂದಿರವನ್ನು ಉಪ ಗುತ್ತಿಗೆ ನೀಡಬಾರದು.

36) ಈ ಉಪಾಹಾರ ಮಂದಿರವನ್ನು ಕಚೇರಿ ಕೆಲಸದ ದಿನಗಳಲ್ಲಿ ಬೆಳಗ್ಗೆ 9-00 ರಿಂದ ಸಂಜೆ 6-30 ಗಂಟೆವರೆಗೆ ಮಾತ್ರ ನಡೆಸತಕ್ಕದ್ದು ಮತ್ತು ಸಾರ್ವಜನಿಕ ರಜಾ ದಿನಗಳಲ್ಲಿ ಈ ಉಪಾಹಾರ ಮಂದಿರವನ್ನು ನಡೆಸುವಂತಿಲ್ಲ. ಅಡುಗೆ ಕೆಲಸ ನಿರ್ವಹಿಸುವ ಕ್ಯಾಂಟೀನ್ ನೌಕರರು/ಸಿಬ್ಬಂದಿ ವರ್ಗದವರು ಬೆಳಿಗ್ಗೆ 7–00 ಗಂಟೆಯಿಂದ ಸಂಜೆ 7–00 ಗಂಟೆಯವರೆಗೆ ಮಾತ್ರ ಕ್ಯಾಂಟೀನ್‌ನಲ್ಲಿ ಕರ್ತವ್ಯ ನಿರ್ವಹಿಸಬಹುದಾಗಿದೆ. ಇವರುಗಳು ಉಳಿದ ವೇಳೆಯಲ್ಲಿ ಇಲ್ಲಿ ತಂಗಲು ಅವಕಾಶ ಇರುವುದಿಲ್ಲ. ಈ ಉಪಾಹಾರ ಮಂದಿರಕ್ಕೆ ಸಾರ್ವಜನಿಕರ ಪ್ರವೇಶವು ಸರ್ಕಾರವು ಕಾಲಾನುಕಾಲದಲ್ಲಿ ನಿಗದಿಪಡಿಸುವ ನಿರ್ಬಂಧಕ್ಕೆ ಒಳಪಟ್ಟಿರುತ್ತದೆ.

37) ಮೇಲೆ ವಿಧಿಸಿರುವ ಷರತ್ತುಗಳಲ್ಲಿ ಯಾವುದೇ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಟೆಂಡರ್‌ನ್ನು ರದ್ದುಗೊಳಿಸುವ ಹಕ್ಕನ್ನು ಸರ್ಕಾರ ಕಾದಿರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಎಸ್. ಮಂಜುನಾಥ್**

ಪಿ.ಆರ್. 651 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

## ಟೆಂಡರ್ ಅಧಿಸೂಚನೆ

**ಸಂಖ್ಯೆ: ಸಿಆಸುಇ 20 ಡಿಎಸ್‌ಡಬ್ಲ್ಯೂ 2008, ಬೆಂಗಳೂರು, ದಿನಾಂಕ: 4ನೇ ಡಿಸೆಂಬರ್ 2008**

**ವಿಷಯ:** ಬಹುಮಹಡಿ ಕಟ್ಟಡದಲ್ಲಿರುವ ಸಚಿವಾಲಯ ಉಪಾಹಾರ ಮಂದಿರವನ್ನು ನಡೆಸಲು ಗುತ್ತಿಗೆ ನೀಡುವ ಬಗ್ಗೆ.

ಟೆಂಡರ್‌ಗಳನ್ನು ಸಲ್ಲಿಸಬೇಕಾದ ವಿಳಾಸ : ಸರ್ಕಾರದ ಅಧೀನ ಕಾರ್ಯದರ್ಶಿ
ಸಿಆಸುಇ (ಕಾರ್ಯಕಾರಿ) ಕೊಠಡಿ ಸಂಖ್ಯೆ: 23, ನೆಲಮಹಡಿ
**ವಿಧಾನಸೌಧ, ಬೆಂಗಳೂರು-560 001**

ಟೆಂಡರ್ ಸಲ್ಲಿಸಲು ಕೊನೆಯ ದಿನಾಂಕ : 29-12-2008ರ ಮಧ್ಯಾಹ್ನ 3-00 ಗಂಟೆವರೆಗೆ

ಟೆಂಡರ್ ನಮೂನೆಯ ದರ : ರೂ. 1000 + 125 ಮೌಲ್ಯವರ್ಧಿತ ತೆರಿಗೆ = ಒಟ್ಟು ರೂ. 1125/-

1. ಕರ್ನಾಟಕ ಸರ್ಕಾರ ಸಚಿವಾಲಯ ಉಪಾಹಾರ ಮಂದಿರದ ಬಹುಮಹಡಿ ಕಟ್ಟಡದ ಉಪಾಹಾರ ಮಂದಿರವನ್ನು ದಿನಾಂಕ: 15-01-2009ರಿಂದ 14-01-2010ರವರೆಗೆ ಒಂದು ವರ್ಷದ ಅವಧಿಗೆ ನಡೆಸಲು ಗುತ್ತಿಗೆ ನೀಡಲು ಟೆಂಡರ್‌ನ್ನು ಕರೆಯಲಾಗಿದೆ.
2. ಬಹುಮಹಡಿ ಕಟ್ಟಡದಲ್ಲಿ ಉಪಾಹಾರ ಮಂದಿರವನ್ನು ನಡೆಸಲು ಟೆಂಡರ್ ಸಲ್ಲಿಸುವವರು ಟೆಂಡರ್‌ನೊಂದಿಗೆ ರೂ. 2.00 ಲಕ್ಷ (ರೂಪಾಯಿ ಎರಡು ಲಕ್ಷಗಳು ಮಾತ್ರ)ಕ್ಕೆ ಮುಂಗಡ ಠೇವಣಿ ಹಣಕ್ಕೆ ಬ್ಯಾಂಕ್ ಡ್ರಾಫ್ಟ್‌ನ್ನು ಸಲ್ಲಿಸತಕ್ಕದ್ದು.
3. ಈ ಬ್ಯಾಂಕ್ ಡ್ರಾಫ್ಟ್‌ನ್ನು “ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸು ಇಲಾಖೆ(ಲೆಕ್ಕಪತ್ರ), ಬೆಂಗಳೂರು” ಇವರ ಹೆಸರಿಗೆ ಬರೆಯತಕ್ಕದ್ದು
4. ಮುಂಗಡ ಠೇವಣಿ ಹಣದ ಸಂಬಂಧ ಬ್ಯಾಂಕ್ ಡ್ರಾಫ್ಟ್‌ನ್ನು ಟೆಂಡರ್ ಜೊತೆಗೆ ಸಲ್ಲಿಸದಿದ್ದಲ್ಲಿ ನೀಡಿರುವ ಟೆಂಡರ್‌ನ್ನು ತಿರಸ್ಕರಿಸಲಾಗುವುದು

5. ಮೊಹರು ಮಾಡಿದ ಟೆಂಡರ್ ಲಕೋಟೆಗಳನ್ನು ದಿನಾಂಕ: 29-12-2008ರ ಮಧ್ಯಾಹ್ನ 3-00 ಗಂಟೆಯೊಳಗಾಗಿ ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಕಾರ್ಯಕಾರಿ), ಕೊಠಡಿ ಸಂಖ್ಯೆ: 23, ವಿಧಾನಸೌಧ, ಬೆಂಗಳೂರು, ಇವರಿಗೆ ಸಲ್ಲಿಸತಕ್ಕದ್ದು.

6. ದಿನಾಂಕ: 30-12-2008ರ ಮಧ್ಯಾಹ್ನ 3-30 ಗಂಟೆಗೆ ಸರಿಯಾಗಿ ಸರ್ಕಾರದ ಉಪ ಕಾರ್ಯದರ್ಶಿ, ಸಿಆಸು ಇಲಾಖೆ(ಕಾರ್ಯಕಾರಿ), ಕೊಠಡಿ ಸಂಖ್ಯೆ:23, ವಿಧಾನಸೌಧ, ಬೆಂಗಳೂರು, ಇವರ ಕೊಠಡಿಯಲ್ಲಿ ಟೆಂಡರ್‌ನ್ನು ತೆರೆಯಲಾಗುವುದು. ಟೆಂಡರನ್ನು ತೆರೆಯುವ ಸಮಯದಲ್ಲಿ ಟೆಂಡರ್‌ದಾರರು ಅಥವಾ ಅವರ ಅಧಿಕೃತ ಪ್ರತಿನಿಧಿ ಹಾಜರಿರಬಹುದು. ಟೆಂಡರ್ ತೆರೆಯುವ ದಿನವು ಯಾವುದಾದರೂ ಸಾರ್ವತ್ರಿಕ ರಜಾ ದಿನವಾಗಿದ್ದಲ್ಲಿ, ಟೆಂಡರನ್ನು ಮಾರನೇ ಕರ್ತವ್ಯದ ದಿನದಂದು ಅದೇ ವೇಳೆ ಮತ್ತು ಸ್ಥಳದಲ್ಲಿ ತೆರೆಯಲಾಗುವುದು.

7. ಟೆಂಡರ್ ನಮೂನೆಯ ದರ ರೂ. 1125-00ಕ್ಕೆ ಬ್ಯಾಂಕ್ ಡ್ರಾಫ್ಟ್‌ನ್ನು ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸು ಇಲಾಖೆ(ಲೆಕ್ಕಪತ್ರ) ಇವರ ಹೆಸರಿಗೆ ಪಡೆದುಕೊಂಡು, ಟೆಂಡರ್ ನಮೂನೆಯನ್ನು ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸು ಇಲಾಖೆ(ಕಾರ್ಯಕಾರಿ) ಕೊಠಡಿ ಸಂಖ್ಯೆ:23, ನೆಲಮಹಡಿ, ವಿಧಾನಸೌಧ, ಬೆಂಗಳೂರು ಇವರಿಂದ ಪಡೆಯಬಹುದಾಗಿದೆ. ಟೆಂಡರ್‌ನ್ನು ಒಪ್ಪಿಕೊಳ್ಳುವ ಅಂತಿಮ ಅಧಿಕಾರವನ್ನು ಪ್ರಧಾನ ಕಾರ್ಯದರ್ಶಿ, ಸಿಆಸುಇ (ಆಡಳಿತ ಸುಧಾರಣೆ) ಇವರು ಹೊಂದಿರುತ್ತಾರೆ.

8. ಈ ಉಪಾಹಾರ ಮಂದಿರವ ಅಂಶ-1ರಲ್ಲಿ ಹೇಳಿರುವಂತೆ 1 (ಒಂದು) ವರ್ಷದ ಅವಧಿಗೆ ಮಾತ್ರ ನಡೆಸಲು ಅನುಮತಿ ನೀಡಲಾಗುವುದು ಹಾಗೂ ಯಾವುದೇ ಹಂತದಲ್ಲಿ 30 ದಿನಗಳ ನೋಟೀಸ್‌ನ್ನು ನೀಡುವ ಮೂಲಕ ಈ ಗುತ್ತಿಗೆಯನ್ನು ರದ್ದುಗೊಳಿಸುವ ಅಧಿಕಾರವನ್ನು ಸರ್ಕಾರ ಹೊಂದಿರುತ್ತದೆ.

9. ಸದರಿ ಟೆಂಡರ್‌ಗಳ ಲಕೋಟೆಯ ಮೇಲೆ "ಕರ್ನಾಟಕ ಸರ್ಕಾರ ಸಚಿವಾಲಯದ ಬಹುಮಹಡಿ ಕಟ್ಟಡ ಉಪಾಹಾರ ಮಂದಿರ" ಎಂದು ನಮೂದಿಸಿರತಕ್ಕದ್ದು.

10. ಟೆಂಡರ್‌ದಾರರು ತಮ್ಮ ಟೆಂಡರ್‌ಗಳಿಗೆ ಪೂರ್ಣ ಹೆಸರಿನೊಂದಿಗೆ ಸಹಿ ಹಾಕಿರಬೇಕು. ಅವರು ಒಂದು ಸಂಸ್ಥೆಯ ಪರವಾಗಿ ಹಾಕಿದಲ್ಲಿ, ವ್ಯವಸ್ಥಾಪಕ ಪಾಲುದಾರರ ಹೆಸರುಗಳನ್ನು ನಮೂದಿಸಬೇಕು.

11. ಟೆಂಡರುದಾರನು ತನ್ನ ವಾಸ ಸ್ಥಳ ಹಾಗೂ ಅಂಚೆ ವಿಳಾಸವನ್ನು ಸ್ಪಷ್ಟವಾಗಿ ಟೆಂಡರ್‌ನಲ್ಲಿ ನಮೂದಿಸತಕ್ಕದ್ದು

12. ಅಯಶಸ್ವಿ ಟೆಂಡರ್‌ದಾರರ ಮುಂಗಡ ಠೇವಣಿ ಹಣವನ್ನು ಬಡ್ಡಿರಹಿತವಾಗಿ ಹಿಂದಿರುಗಿಸಲಾಗುವುದು.

13. ಯಶಸ್ವಿ ಟೆಂಡರ್‌ದಾರರ ಮುಂಗಡ ಹಣವನ್ನು ಭದ್ರತಾ ಠೇವಣಿಯನ್ನಾಗಿ ಪರಿಗಣಿಸಿ ಸರ್ಕಾರಿ ಲೆಕ್ಕಕ್ಕೆ ಜಮಾ ಮಾಡಲಾಗುವುದು. ಟೆಂಡರ್ ಅವಧಿ ಮುಗಿದ ನಂತರ ಸರ್ಕಾರಕ್ಕೆ ಟೆಂಡರುದಾರರಿಂದ ಯಾವುದೇ ಬಾಕಿ ಇಲ್ಲದಿದ್ದಲ್ಲಿ, ಭದ್ರತಾ ಠೇವಣಿಯನ್ನು ಬಡ್ಡಿರಹಿತವಾಗಿ ಹಿಂದಿರುಗಿಸಲಾಗುವುದು.

14. ಪ್ರತಿಯೊಂದು ಆಹಾರ ಪದಾರ್ಥಗಳು, ಕಾಫಿ, ಟೀ ಇತ್ಯಾದಿಗಳಿಗೆ ಈ ಟೆಂಡರ್ ಅಧಿಸೂಚನೆಯಲ್ಲಿ ನಿಗದಿಪಡಿಸಿರುವ ದರ ಮತ್ತು ಪ್ರಮಾಣದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯ, ಕರ್ನಾಟಕ ವಿಧಾನಸಭೆ ಸಚಿವಾಲಯ ಮತ್ತು ಕರ್ನಾಟಕ ವಿಧಾನ ಪರಿಷತ್ ಸಚಿವಾಲಯದ ಅಧಿಕಾರಿ:ನೌಕರರಿಗೆ ಟೆಂಡರ್‌ದಾರರು ಸರಬರಾಜು ಮಾಡತಕ್ಕದ್ದು. ಇತರರಿಗೆ ಟೆಂಡರ್‌ದಾರರೇ ದರಗಳನ್ನು ನಿಗದಿಪಡಿಸಬಹುದು.

15. ಬಹುಮಹಡಿ ಕಟ್ಟಡದ ಉಪಾಹಾರ ಮಂದಿರಕ್ಕೆ ಸಂಬಂಧಿಸಿದಂತೆ ಕನಿಷ್ಠ ಮಾಸಿಕ ರೂ. 1,09,000/- (ರೂಪಾಯಿ ಒಂದು ಲಕ್ಷದ ಒಂಭತ್ತು ಸಾವಿರಗಳು ಮಾತ್ರ) ಬಾಡಿಗೆಯನ್ನು ನಿಗದಿಪಡಿಸಲಾಗಿದೆ. ಅದಕ್ಕಿಂತ ಕಡಿಮೆ ಬಾಡಿಗೆ ನಮೂದಿಸಿದಲ್ಲಿ ಟೆಂಡರ್‌ನ್ನು ಪರಿಗಣಿಸಲಾಗುವುದಿಲ್ಲ.

16. ಟೆಂಡರ್‌ದಾರರು 2008ನೇ ಸಾಲಿನಲ್ಲಿ ಮಹಾನಗರ ಪಾಲಿಕೆ/ನಗರಸಭೆ ಮತ್ತು ಕಾರ್ಮಿಕ ಇಲಾಖೆ ಇವರಿಂದ ಪಡೆದಿರುವ ಪ್ರಮಾಣಪತ್ರ ಉಪಾಹಾರ ಮಂದಿರದ ನೌಕರರಿಗೆ ಸಂಬಂಧಿಸಿದಂತೆ 2008ನೇ ಸಾಲಿನಲ್ಲಿ ಇತ್ತೀಚೆಗೆ ಇ.ಎಸ್.ಐ.(E.S.I.) ಮತ್ತು ಪ್ರಾವಿಡೆಂಟ್ ಫಂಡ್‌ನ್ನು ಪಾವತಿಸಿರುವ ರಶೀದಿ ಇತ್ಯಾದಿ ಅವಶ್ಯಕ ದೃಢೀಕೃತ ದಾಖಲೆಗಳನ್ನು ಹಾಜರುಪಡಿಸತಕ್ಕದ್ದು. ಟೆಂಡರ್ ತೆರೆಯುವ ಸಮಯದಲ್ಲಿ ಟೆಂಡರ್ ದಾರರು ಆಕ್ಷೇಪಣೆ ವ್ಯಕ್ತಪಡಿಸಿದಲ್ಲಿ ಮಹಾನಗರ ಪಾಲಿಕೆಯಿಂದ ಪಡೆದಿರುವ ಮೂಲ ಪ್ರಮಾಣಪತ್ರವನ್ನು ಒದಗಿಸತಕ್ಕದ್ದು.

17. ಯಶಸ್ವಿ ಟೆಂಡರ್‌ದಾರರು ಅಡುಗೆ ತಯಾರಿಸುವುದಕ್ಕಾಗಿ ಹಾಗೂ ಸರಬರಾಜು ಮಾಡುವುದಕ್ಕಾಗಿ ತಮ್ಮದೇ ಆದ ಅಡುಗೆ ಪಾತ್ರೆಗಳನ್ನು ಹಾಗೂ ಇತರೆ ವಸ್ತುಗಳನ್ನು ಒದಗಿಸಿಕೊಳ್ಳತಕ್ಕದ್ದು.

18. ಗೊತ್ತುಪಡಿಸಿದ ಅರ್ಜಿ ನಮೂನೆಯಲ್ಲಿ ಹಾಗೂ ನಿಗದಿತ ದಿನಾಂಕ ಮತ್ತು ಸಮಯದೊಳಗೆ ಸಲ್ಲಿಸದೇ ಇರುವ ಟೆಂಡರ್‌ನ್ನು ತಿರಸ್ಕರಿಸಲಾಗುವುದು.
19. ದಿನಾಂಕ: 27–12–2008ರ ಮಧ್ಯಾಹ್ನ 3–00 ಗಂಟೆವರೆಗೆ ಮಾತ್ರ ಈ ಟೆಂಡರ್ ಅರ್ಜಿಗಳನ್ನು ಮಾರಾಟ ಮಾಡಲಾಗುವುದು
20. ಗೊತ್ತುಪಡಿಸಿದ ನಮೂನೆಯ ನಿಗದಿತ ಪಟ್ಟಿಯಲ್ಲಿನ ಯಾವುದೇ ಮಾರ್ಪಾಡುಗಳನ್ನು ಮಾಡಿರುವ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
21. ಯಶಸ್ವಿ ಟೆಂಡರುದಾರರು ಕರಾರು ಒಪ್ಪಂದ ಪತ್ರವನ್ನು ಆದೇಶ ಹೊರಡಿಸಿದ ದಿನಾಂಕದಿಂದ ಒಂದು ವಾರದೊಳಗೆ ನಿಗದಿತ ಮೌಲ್ಯದ ಛಾಪಾ ಕಾಗದದಲ್ಲಿ ಸಹಿ ಹಾಕಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು. ಈ ಅವಧಿಯೊಳಗೆ ನಿಗದಿತ ಕರಾರು ಒಪ್ಪಂದ ಪತ್ರಕ್ಕೆ ಸಹಿ ಹಾಕಿ ಸಲ್ಲಿಸಲು ವಿಫಲರಾದಲ್ಲಿ ಅವರು ಸಲ್ಲಿಸಿರುವ ಮುಂಗಡ ಠೇವಣಿ ಹಣವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು
22. ಮೂರು ವರ್ಷಕ್ಕೂ ಮೇಲ್ಪಟ್ಟು ಉಪಾಹಾರ ಮಂದಿರವನ್ನು ನಡೆಸಿರುವ ಬಗ್ಗೆ ಅನುಭವದ ಪ್ರಮಾಣಪತ್ರ ಹಾಗೂ ದಾಖಲೆಗಳನ್ನು ನೀಡತಕ್ಕದ್ದು ಮತ್ತು ಈಗ ನಡೆಸುತ್ತಿರುವ ಉಪಾಹಾರ ಮಂದಿರಕ್ಕೆ ಸಂಬಂಧಿಸಿದಂತೆ 2006–2007ನೇ ಸಾಲಿನಲ್ಲಿ ಆದಾಯ ತೆರಿಗೆ ಪಾವತಿ ಮಾಡಿರುವ(ಸರಳ್) ದೃಢೀಕರಣ ಪತ್ರ ಮತ್ತು ಅಕ್ಟೋಬರ್–2008ನೇ ತಿಂಗಳಿನಲ್ಲಿ ಮಾರಾಟ ತೆರಿಗೆ ಪಾವತಿ ಮಾಡಿರುವ ರಶೀದಿಯನ್ನು ಟೆಂಡರ್‌ದಾರರು ಟೆಂಡರ್‌ನೊಂದಿಗೆ ಒದಗಿಸತಕ್ಕದ್ದು.
23. ಯಾವುದೇ ವ್ಯಾಜ್ಯ ಉಂಟಾದಲ್ಲಿ ಈ ಬಗ್ಗೆ ತೀರ್ಮಾನ ತೆಗೆದುಕೊಳ್ಳಲು ಬೆಂಗಳೂರಿನಲ್ಲಿರುವ ನ್ಯಾಯಾಲಯಗಳಿಗೆ ಮಾತ್ರ ಅಧಿಕಾರ ಇದೆ.
24. ಉಪಾಹಾರ ಮಂದಿರವನ್ನು ಸ್ವಚ್ಛವಾಗಿ ಇಡುವುದಲ್ಲದೇ, ಸೋಂಕು ರೋಗ, ಇಲಿ, ನೊಣ, ಸೊಳ್ಳೆ ಇತ್ಯಾದಿ ಸಮಸ್ಯೆಗಳು ಉಂಟಾಗದಂತೆ ದಿನಂಪ್ರತಿ ಔಷಧಿಯನ್ನು ಸಿಂಪಡಿಸತಕ್ಕದ್ದು
25. ಇಲ್ಲಿ ನೀಡುವ ತಿಂಡಿ-ತಿನಿಸು, ಆಹಾರ ಪದಾರ್ಥಗಳನ್ನು ತಿಂದು ಗ್ರಾಹಕರು ಅಸ್ವಸ್ಥರಾದರೆ, ಅದರಿಂದ ಉಂಟಾಗುವ ಪರಿಣಾಮಗಳಿಗೆ ಉಪಾಹಾರ ಮಂದಿರದ ಮಾಲೀಕರೇ ಸಂಪೂರ್ಣ ಜವಾಬ್ದಾರರಾಗಿರುತ್ತಾರೆ. ತಿಂಡಿ–ತಿನಿಸುಗಳಿಗೆ ಯಾವುದೇ ರಾಸಾಯನಿಕ ಬಣ್ಣ ಬಳಸಬಾರದು.
26. ಉಪಾಹಾರ ಮಂದಿರ ನಡೆಸುವಲ್ಲಿ ಸಂಪೂರ್ಣ ಜವಾಬ್ದಾರಿ ವಹಿಸಿಕೊಳ್ಳುವ ವ್ಯಕ್ತಿ ಮತ್ತು ಯಾವುದೇ ತಪ್ಪು ಕೆಲಸ, ಅವ್ಯವಸ್ಥಿತ ನಿರ್ವಹಣೆ ಅಥವಾ ಅಪಘಾತವಾದಲ್ಲಿ ಜವಾಬ್ದಾರಿ ಹೊತ್ತು ಸೂಕ್ತ ಪರಿಹಾರ ನೀಡುವ ಮಾಲೀಕರ / ಪಾಲುದಾರರ ಅಥವಾ ಸಂಸ್ಥೆಯ ಜವಾಬ್ದಾರಿಯುತ ಮಾಲೀಕರ ಹೆಸರು ಮತ್ತು ವಿಳಾಸವನ್ನು ನಮೂದಿಸತಕ್ಕದ್ದು.
27. ಟೆಂಡರ್‌ಗಳನ್ನು ಯಾವುದೇ ಕಾರಣ ನೀಡದೆ ಒಪ್ಪಿಕೊಳ್ಳುವ ಅಥವಾ ತಿರಸ್ಕರಿಸುವ ಹಕ್ಕನ್ನು ಸರ್ಕಾರ ಕಾದಿರಿಸಿದೆ.
28. ಬಹು ಮಹಡಿ ಕಟ್ಟಡಗಳಲ್ಲಿನ ಉಪಾಹಾರ ಮಂದಿರದ ವಿದ್ಯುತ್ ಮತ್ತು ನೀರಿನ ಬಿಲ್ಲುಗಳ ಸಂಪೂರ್ಣ ವೆಚ್ಚವನ್ನು ಅಧಿಕೃತ ಗುತ್ತಿಗೆದಾರರೇ ಪಾವತಿ ಮಾಡತಕ್ಕದ್ದು.
29. ಬಹುಮಹಡಿ ಕಟ್ಟಡದ ಉಪಾಹಾರ ಮಂದಿರದ ಒಟ್ಟು ವಿಸ್ತೀರ್ಣ 317.24 sq.mtr. ಇರುತ್ತದೆ. ತಿಂಡಿಗಳನ್ನು ತಯಾರಿಸಲು ಬಹುಮಹಡಿ ಕಟ್ಟಡದಲ್ಲಿ ಮೂಲಭೂತ ಸೌಕರ್ಯವಿರುವ 560 ಚದರಡಿಗಳ ವಿಸ್ತೀರ್ಣ ಇರುವ ಅಡುಗೆ ಕೋಣೆ ಸೌಲಭ್ಯವನ್ನು ನೀಡಲಾಗುವುದು. ಟೆಂಡರ್‌ದಾರರು ಟೆಂಡರ್ ಸಲ್ಲಿಸುವ ಮುನ್ನ ಬಹುಮಹಡಿ ಕಟ್ಟಡದಲ್ಲಿರುವ ಅಡುಗೆ ಕೋಣೆಯನ್ನು ಪರಿವೀಕ್ಷಣೆ ಮಾಡಬಹುದು.
30. ಕರ್ನಾಟಕ ಸರ್ಕಾರ ಸಚಿವಾಲಯ, ವಿಧಾನಸಭೆ ಸಚಿವಾಲಯ ಮತ್ತು ವಿಧಾನ ಪರಿಷತ್ತಿನ ಸಚಿವಾಲಯದ ಸಿಬ್ಬಂದಿಗೆ ಅವರು ಗುರುತಿನ ಚೀಟಿಯನ್ನು ತೋರಿಸಿದಲ್ಲಿ ಈ ಕೆಳಗಿನ ತಿಂಡಿ ತಿನಿಸು, ಕಾಫೀ, ಟೀ ಇತ್ಯಾದಿಗಳನ್ನು ಅವುಗಳ ಮುಂದೆ ನಿಗದಿಪಡಿಸಿರುವ ಪ್ರಮಾಣ ಮತ್ತು ದರದಲ್ಲಿ ಒದಗಿಸತಕ್ಕದ್ದು.

| ಕ್ರ ಸಂ. | ಕಾಫೀ, ಟೀ, ತಿಂಡಿ ಇತ್ಯಾದಿಗಳ ಹೆಸರು | ಪ್ರಮಾಣ | ದರ ರೂ. |
|---|---|---|---|
| 01 | ಇಡ್ಲಿ (ಎರಡಕ್ಕೆ) | 75 gm. | 5/- |
| 02 | ರವೆ ಇಡ್ಲಿ | 125gm | 8/- |
| 03 | ಖಾರಾಬಾತ್ | 100gm | 4/- |
| 04 | ಚೌಚೌ ಬಾತ್ | 200gm | 8/- |
| 05 | ಪಕೋಡ | 100gm | 7/- |
| 06 | ರೈಸ್ ಬಾತ್ | 300gm | 6/- |

| | | | |
|---|---|---|---|
| 07 | ಅನ್ನ ಸಾಂಬಾರ್ | 325gm | 5/- |
| 08 | ಮಸಾಲಾ ದೋಸೆ | 250gm | 8/- |
| 09 | ಸೆಟ್ ದೋಸೆ | 250gm | 8/- |
| 10 | ಪೂರಿ | 250gm | 10/- |
| 11 | ಕಾಫಿ/ಟೀ | 100 ಔನ್ಸ್ | 3.50/- |
| 12 | ಬೋಂಡಾ | 100gm | 7/- |
| 13 | ಲಂಚ್ (ಅನ್ನ, ಸಾಂಬಾರ್, ರಸಮ್, ಮೊಸರು, ಪಲ್ಯ, ಚಪಾತಿ/ಪೂರಿ/ರಾಗಿ ಮುದ್ದೆ) | 500 gm | 15/- |
| 14 | ಉದ್ದಿನ ವಡೆ | 100 gm | 5/- |
| 15 | ಮಸಾಲೆ ವಡೆ | 150 gm | 7/- |

34) ಉಪಾಹಾರ ಮಂದಿರ ಮತ್ತು ಅದರ ಆವರಣದಲ್ಲಿ ಇನ್ಯಾವುದೇ ವಾಣಿಜ್ಯ ಚಟುವಟಿಕೆಗಳನ್ನು ನಡೆಸುವಂತಿಲ್ಲ

35) ಯಶಸ್ವಿ ಟೆಂಡರ್‌ದಾರರು ಯಾವ ಕಾರಣಕ್ಕೂ ತಾವು ಗುತ್ತಿಗೆ ಪಡೆದ ಉಪಾಹಾರ ಮಂದಿರವನ್ನು ಉಪ ಗುತ್ತಿಗೆ ನೀಡಬಾರದು.

38) ಈ ಉಪಾಹಾರ ಮಂದಿರವನ್ನು ಕಚೇರಿ ಕೆಲಸದ ದಿನಗಳಲ್ಲಿ ಬೆಳಿಗ್ಗೆ 9-00 ರಿಂದ ಸಂಜೆ 6-30 ಗಂಟೆವರೆಗೆ ಮಾತ್ರ ನಡೆಸತಕ್ಕದ್ದು ಮತ್ತು ಸಾರ್ವಜನಿಕ ರಜಾ ದಿನಗಳಲ್ಲಿ ಈ ಉಪಾಹಾರ ಮಂದಿರವನ್ನು ನಡೆಸುವಂತಿಲ್ಲ. ಅಡುಗೆ ಕೆಲಸ ನಿರ್ವಹಿಸುವ ಕ್ಯಾಂಟೀನ್ ನೌಕರರು/ಸಿಬ್ಬಂದಿ ವರ್ಗದವರು ಬೆಳಿಗ್ಗೆ 7–00 ಗಂಟೆಯಿಂದ ಸಂಜೆ 7–00 ಗಂಟೆಯವರೆಗೆ ಮಾತ್ರ ಕ್ಯಾಂಟೀನ್‌ನಲ್ಲಿ ಕರ್ತವ್ಯ ನಿರ್ವಹಿಸಬಹುದಾಗಿದೆ. ಇವರುಗಳು ಉಳಿದ ವೇಳೆಯಲ್ಲಿ ಇಲ್ಲಿ ತಂಗಲು ಅವಕಾಶ ಇರುವುದಿಲ್ಲ. ಈ ಉಪಾಹಾರ ಮಂದಿರಗಳಿಗೆ ಸಾರ್ವಜನಿಕರ ಪ್ರವೇಶವು ಸರ್ಕಾರವು ಕಾಲಾನುಕಾಲದಲ್ಲಿ ನಿಗದಿಪಡಿಸುವ ನಿರ್ಬಂಧಕ್ಕೆ ಒಳಪಟ್ಟಿರುತ್ತದೆ.

39) ಮೇಲೆ ವಿಧಿಸಿರುವ ಷರತ್ತುಗಳಲ್ಲಿ ಯಾವುದೇ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಟೆಂಡರ್‌ನ್ನು ರದ್ದುಗೊಳಿಸುವ ಹಕ್ಕನ್ನು ಸರ್ಕಾರ ಕಾದಿರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಎಸ್. ಮಂಜುನಾಥ್**

ಪಿ.ಆರ್. 650

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ)

**ಪೊಲೀಸ್ ಅಧೀಕ್ಷಕರವರ ಕಛೇರಿ, ಪೊಲೀಸ್ ವಾಹನ ಚಾಲನಾ ಮತ್ತು ನಿರ್ವಹಣಾ ಶಾಲೆ, ಯಲಹಂಕ, ಬೆಂಗಳೂರು**

**ತಿದ್ದುಪಡಿ ಅಧಿಸೂಚನೆ**

**ಸಂಖ್ಯೆ: ಪಿಡಿಎಂಎಸ್/ಡಿವೈಎಸ್‌ಪಿ/ಟೆಂಡರ್/2008–09, ದಿನಾಂಕ: 19ನೇ ಡಿಸೆಂಬರ್ 2008**

**ವಿಷಯ:** ಪಿ.ಡಿ.ಎಂ.ಎಸ್, ಯಲಹಂಕ ಘಟಕದಲ್ಲಿ ದಾಸ್ತಾನು ಇರುವ ಹಳೆಯ ಮರದ ತುಂಡು ತುಕಡಿಗಳ ವಿಲೇವಾರಿಗಾಗಿ ಬಹಿರಂಗ ಹರಾಜು ಪ್ರಕಟಣೆ ಬಗ್ಗೆ.

**ಉಲ್ಲೇಖ:**
1. ಉಪ ಅರಣ್ಯ ಸಂರಕ್ಷಣಾಧಿಕಾರಿ ರವರ ಪತ್ರ ಸಂ: ಎ/5/ಅನುಪಯುಕ್ತ/ಸಿಆರ್/50/2006–07, ದಿನಾಂಕ: 23.05.2008.
2. ಉಪ ಅರಣ್ಯ ಸಂರಕ್ಷಣಾಧಿಕಾರಿ ರವರ ಪತ್ರ ಸಂ: ಎ/6(5)/ಅನುಪಯುಕ್ತ/ಸಿಆರ್/50/2006–07, ದಿನಾಂಕ: 23.10.2008.

ಮೇಲ್ಕಾಣಿಸಿದ ವಿಷಯಕ್ಕೆ ಸಂಬಂಧಿಸಿದಂತೆ, ಸಾರ್ವಜನಿಕರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಉಲ್ಲೇಖ–1 ಮತ್ತು 2 ರನುಸಾರ ಪೊಲೀಸ್ ವಾಹನ ಚಾಲನಾ ಮತ್ತು ನಿರ್ವಹಣಾ ಶಾಲೆ, ಯಲಹಂಕ, ಬೆಂಗಳೂರು ನಲ್ಲಿರುವ ಹಳೆಯ ಕಟ್ಟಡದ ಮರದ ಪಟ್ಟಿ ತುಂಡುಗಳನ್ನು ಕಛೇರಿಯ ಆವರಣದಲ್ಲಿ ದಿನಾಂಕ: 16.12.2008 ರಂದು ಬೆಳಿಗ್ಗೆ 11.00 ಗಂಟೆಗೆ ಬಹಿರಂಗ ಟೆಂಡರ್ ಹರಾಜು ಮಾಡಲು ನಿರ್ಧರಿಸಲಾಗಿತ್ತು. ಕಾರಣಾಂತರಗಳಿಂದ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಮುದ್ರಣಗೊಳ್ಳದ ಪ್ರಯುಕ್ತ ಸದರಿ ಅಧಿಸೂಚನೆಯನ್ನು ದಿನಾಂಕ: 15.01.2009 ಕ್ಕೆ ಬೆಳಿಗ್ಗೆ 11.00 ಗಂಟೆಗೆ ಬಹಿರಂಗ ಹರಾಜು ನಿಗಧಿಪಡಿಸಲಾಗಿದೆ. ಆದ್ದರಿಂದ ಇಚ್ಛೆವುಳ್ಳವರು ಸದರಿ ಹರಾಜಿನಲ್ಲಿ ಭಾಗವಹಿಸಿ ಮರದ ಪಟ್ಟಿ ತುಂಡುಗಳನ್ನು ಖರೀದಿಸಬಹುದಾಗಿದೆ.

| ಕ್ರ. ಸಂ. | ಹಳೆಯ ಮರದ ವಿವರಗಳು | ಪ್ರಮಾಣ | ಷರಾ |
|---|---|---|---|
| I. | ಹಳೆಯ ಮರದ ಕಿಟಕಿಗಳು | | |
| | 1) 5 ಅಡಿ ಉದ್ದ X5 ಅಡಿ ಅಗಲ – 02 ಸಂಖ್ಯೆ<br>2) 5 ಅಡಿ ಉದ್ದ X3 ಅಡಿ ಅಗಲ – 04 ಸಂಖ್ಯೆ<br>3) 4 ಅಡಿ ಉದ್ದ X3 ಅಡಿ ಅಗಲ – 02 ಸಂಖ್ಯೆ | ಒಟ್ಟು 08 ಸಂಖ್ಯೆ | |
| II. | ಹಳೆಯ ಮರದ ರೀಪ್‌ಗಳು ಇತ್ಯಾದಿ | 04 ಟನ್ | |
| III. | ಕಾಡು ಜಾತಿಯ ಹಳೆಯ ಮರದ ತೊಲೆಗಳು | | |
| | 5 ಮೀಟರ್ ಉದ್ದ 6 ಇಂಚ್ ಅಗಲ, 4 ಇಂಚ್ ದಪ್ಪ | 15 ಘನ ಅಡಿ | |
| IV. | ಕಾಡು ಜಾತಿ ಮರದ ಹಳೆಯ ರೀಪರ್ಸ್‌ಗಳು | | |
| | 2.8 ಮೀಟರ್ ಉದ್ದ 4 ಇಂಚ್ ಅಗಲ, 2 ಇಂಚ್ ದಪ್ಪ | 4.50 ಘನ ಅಡಿ<br>ಸಿ.ಎಫ್.ಟಿ | |
| V. | ಹಾಳಾಗಿರುವ ಮರದ ಹಳೆಯ ರೀಪರ್ಸ್‌ಗಳು ಇತ್ಯಾದಿ | | |
| | 1 ಮೀಟರ್ | 1 ಸಿ.ಎಫ್.ಟಿ<br>(ಸೌದೆ) | |

ಮೇಲ್ಕಾಣಿಸಿದ ಮರದ ಹಳೆಯ ತುಂಡು, ರೀಪರ್ಸ್ ಇತ್ಯಾದಿಗಳನ್ನು ಖರೀದಿಸಲು ಟೆಂಡರ್ ಕಮ್ ಹರಾಜಿನಲ್ಲಿ ಭಾಗವಹಿಸುವ ಬಿಡ್‌ದಾರರು ಈ ಕೆಳಗೆ ಸೂಚಿಸಿರುವ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟಿರಬೇಕಾಗುತ್ತದೆ.

**ಟೆಂಡರ್ ಕಮ್ ಬಹಿರಂಗ ಹರಾಜಿನ ಷರತ್ತು ಮತ್ತು ನಿಬಂಧನೆಗಳು**

1. ಮೊಹರು ಮಾಡಿದ ಟೆಂಡರ್ ಲಕೋಟೆಯನ್ನು (ಸೀಲ್ಡ್ ಕವರ್) ಪೊಲೀಸ್ ಅಧೀಕ್ಷಕರು, ಪಿ.ಡಿ.ಎಂ.ಎಸ್. ಯಲಹಂಕ, ಬೆಂಗಳೂರು–63 ಇವರ ವಿಳಾಸಕ್ಕೆ ಕಳುಹಿಸಬೇಕು. ಲಕೋಟೆಯ ಮೇಲೆ ನಿರುಪಯುಕ್ತ ಮರಮಟ್ಟುಗಳ ಖರೀದಿ ಬಗ್ಗೆ ಎಂದು ಬಿಡಿ ಅಕ್ಷರಗಳಲ್ಲಿ ನಮೂದಿಸಬೇಕು.
2. ಪ್ರತಿಯೊಬ್ಬ ಟೆಂಡರ್‌ದಾರರು / ಬಿಡ್‌ದಾರರು ಪ್ರತಿ ಹಳೆಯ ಮರದ ತುಂಡುಗಳ ಹರಾಜಿನಲ್ಲಿ ಭಾಗವಹಿಸಲು ಭದ್ರತಾ ಠೇವಣಿ ರೂ.2000=00 ಗಳನ್ನು ಡಿ.ಡಿ. ಅಥವಾ ನಗದು ರೂಪದಲ್ಲಿ ಪೊಲೀಸ್ ಅಧೀಕ್ಷಕರು, ಪಿ.ಡಿ.ಎಂ.ಎಸ್. ಯಲಹಂಕ ಬೆಂಗಳೂರು ಇವರ ಹೆಸರಿನಲ್ಲಿ ಪಾವತಿ ಮಾಡಿ ಅರ್ಜಿಯನ್ನು ಸಲ್ಲಿಸಬೇಕು. ಚೆಕ್ಕುಗಳನ್ನು ಸ್ವೀಕರಿಸುವುದಿಲ್ಲ. ಠೇವಣಿ ಹಣಕ್ಕೆ ಬಡ್ಡಿ ಕೊಡಲಾಗುವುದಿಲ್ಲ. ಠೇವಣಿ ಸಲ್ಲಿಸದೆ ಕಳುಹಿಸಲಾದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
3. ಟೆಂಡರ್ ಫಾರಂನಲ್ಲಿ ದರವನ್ನು ಅಂಕಿ ಮತ್ತು ಅಕ್ಷರಗಳಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಏನಾದರೂ ತಿದ್ದುಪಡಿ ಮಾಡಿದ್ದಲ್ಲಿ ಟೆಂಡರ್‌ದಾರರೂ ಪೂರ್ಣ ಸಹಿಯೊಂದಿಗೆ ದೃಢೀಕರಿಸಿರಬೇಕು.
4. ಟೆಂಡರ್ ಫಾರಂಗಳನ್ನು ವರ್ಗಾವಣೆ ಮಾಡಲಾಗುವುದಿಲ್ಲ.
5. ಟೆಂಡರ್‌ಗಳನ್ನು ದಿನಾಂಕ: 14.01.2009 ರಂದು ಸಂಜೆ 5.00 ಗಂಟೆಯ ಒಳಗೆ ಈ ಕಛೇರಿಗೆ ತಲುಪುವಂತೆ ಕಳುಹಿಸಬೇಕು. ತಡವಾಗಿ ಬಂದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
6. ಟೆಂಡರ್‌ದಾರರು ಸಹ ಹೆಚ್ಚಿನ ಭದ್ರತಾ ಠೇವಣಿ ಹಣವಿಲ್ಲದೆ ಬಹಿರಂಗ ಹರಾಜಿನಲ್ಲಿ ಭಾಗವಹಿಸಬಹುದು.
7. ಪೊಲೀಸ್ ಅಧೀಕ್ಷಕರು ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಬಹಿರಂಗ ಹರಾಜನ್ನು ನಡೆಸುವರು. ಠೇವಣಿ ತುಂಬಿದ ಟೆಂಡರ್ / ಸವಾಲುದಾರರು ಹರಾಜಿನಲ್ಲಿ ಭಾಗವಹಿಸಲು ಅರ್ಹರಾಗಿರುತ್ತಾರೆ.
8. ಬಹಿರಂಗ ಹರಾಜಿನಲ್ಲಿ ಅತೀ ಹೆಚ್ಚಿನ ಬೆಲೆಯನ್ನು ದಾಖಲು ಮಾಡಿದ ನಂತರ ಸ್ವೀಕೃತವಾದ ಟೆಂಡರ್ ಲಕೋಟೆಯನ್ನು ಪೊಲೀಸ್ ಅಧೀಕ್ಷಕರವರಾಗಲೀ ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳಾಗಲೀ ಸಾರ್ವಜನಿಕರ ಸಮಕ್ಷಮದಲ್ಲಿ ತೆರೆದು ಬಹಿರಂಗಪಡಿಸುವರು. ಈ ಎರಡರಲ್ಲಿ ಯಾರು ಹೆಚ್ಚಿನ ಬೆಲೆಯನ್ನು ನೀಡಿರುತ್ತಾರೋ ಅವರನ್ನು ಯಶಸ್ವಿ ಖರೀದಿದಾರರೆಂದು ಪರಿಗಣಿಸಲಾಗುವುದು.
9. ಯಶಸ್ವಿಯಾದ ಟೆಂಡರ್ / ಸವಾಲುದಾರರು ಹಳೆಯ ಮರದ ತುಂಡುಗಳ ಒಟ್ಟು ಬೆಲೆಯ ಶೇಕಡಾ 25 ರಷ್ಟು ಹಣವನ್ನು ಸ್ಥಳದಲ್ಲಿಯೇ ಕಟ್ಟಬೇಕು. ಉಳಿದ ಹಣವನ್ನು ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ರವರು ಅನುಮೋದಿಸಿದ ನಂತರ ಪಾವತಿ ಮಾಡಿ ಒಂದು

ತಿಂಗಳೊಳಗಾಗಿ ತಮ್ಮ ಸ್ವಂತ ಖರ್ಚಿನಲ್ಲಿ ಹಳೆಯ ಮರ ಮಟ್ಟುಗಳನ್ನು ತೆಗೆದುಕೊಂಡು ಹೋಗಬೇಕು. ತಪ್ಪಿದರೆ ಮುಂಗಡವಾಗಿ ಕಟ್ಟಿದ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

10. ಪೂರ್ಣ ಮೊತ್ತವನ್ನು ಪಿ.ಡಿ.ಎಂ.ಎಸ್. ಯಲಹಂಕ ಪೊಲೀಸ್ ಅಧೀಕ್ಷಕರ ಕಛೇರಿಯಲ್ಲಿ ನಗದಾಗಿ ಪಾವತಿ ಮಾಡಬೇಕು. ಚೆಕ್ಕುಗಳನ್ನು ಸ್ವೀಕರಿಸಲಾಗುವುದಿಲ್ಲ.
11. ಹರಾಜಿನಲ್ಲಿ ಭಾಗವಹಿಸಿದ ಟೆಂಡರ್ / ಸವಾಲುದಾರರು ಹರಾಜು ಮುಗಿದ ನಂತರ ಹರಾಜಿನಲ್ಲಿ ಯಶಸ್ವಿಯಾದವರು ಮತ್ತು ಯಶಸ್ವಿಯಾಗದವರು ಸರ್ಕಾರಿ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.
12. ಹರಾಜು ಮಾಡಲಾದ ಹಳೆಯ ಮರದ ತುಂಡುಗಳ ಮೌಲ್ಯಕ್ಕೆ ನಿಯಮಾನುಸಾರ ಹಳೆಯ ಮರದ ತುಂಡುಗಳನ್ನು ತೆಗೆದುಕೊಂಡು ಹೋಗುವ ಸಂದರ್ಭದಲ್ಲಿ ಚಾಲ್ತಿಯಲ್ಲಿರುವ ದರದ ಪ್ರಕಾರ ತೆರಿಗೆ ಮತ್ತು ಸೆಸ್‌ಗಳನ್ನು ಸಹ ಪಾವತಿ ಮಾಡಬೇಕು.
13. ಟೆಂಡರ್ ಹರಾಜಿನಲ್ಲಿ ಭಾಗವಹಿಸಿ ಯಶಸ್ವಿಯಾದ ಬಿಡ್‌ದಾರರ ತಪ್ಪು ಗ್ರಹಿಕೆಯಿಂದ ವಿವಾದ ಉಂಟಾಗಿ ಇಲಾಖೆಗೆ ನಷ್ಟವಾಗುವಂತಹ ಸಂದರ್ಭ ಉದ್ಭವಿಸಿದಲ್ಲಿ, ಅಂತಹ ಟೆಂಡರ್ / ಸವಾಲುದಾರರು ಮುಂಗಡವಾಗಿ ಕಟ್ಟಿಡಲಾದ (ಇ.ಎಂ.ಡಿ.) ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಮತ್ತು ಅಂತಹವರ ವಿರುದ್ಧ ಕಾನೂನುಬದ್ಧವಾಗಿ ಕ್ರಮ ಕೈಗೊಳ್ಳಲಾಗುವುದು.
14. ಹರಾಜಿನ ಯಾವುದೇ ಟೆಂಡರ್ / ಸವಾಲನ್ನು ಯಾವುದೇ ಕಾರಣಕ್ಕಾಗಿ ರದ್ದುಪಡಿಸುವ / ತಿರಸ್ಕರಿಸುವ ಅಧಿಕಾರವನ್ನು ಪೊಲೀಸ್ ಅಧೀಕ್ಷಕರು, ಪಿ.ಡಿ.ಎಂ.ಎಸ್, ಯಲಹಂಕ, ಬೆಂಗಳೂರು ಇವರು ಹೊಂದಿರುತ್ತಾರೆ. ಇವರ ತೀರ್ಮಾನವೇ ಅಂತಿಮವಾದುದು.
15. ಮೇಲ್ಕಂಡ ಟೆಂಡರ್ / ಹರಾಜಿನ ಸಂಬಂಧದಲ್ಲಿ ಯಾವುದೇ ವಾದ ವಿವಾದಗಳು ಉದ್ಭವಿಸಿದಲ್ಲಿ, ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ಇವರು ನೀಡುವ ತೀರ್ಮಾನವೇ ಅಂತಿಮವಾಗಿರುತ್ತದೆ.
16. ಹರಾಜು ಮಾಡಲಿರುವ ನಿರುಪಯುಕ್ತ ಹಳೆಯ ಮರ ಮಟ್ಟುಗಳು ಯಲಹಂಕದಲ್ಲಿರುವ ಪೊಲೀಸ್ ವಾಹನ ಚಾಲನಾ ಮತ್ತು ನಿರ್ವಹಣಾ ಶಾಲೆಯ ಆವರಣದಲ್ಲಿ ಪರಿಶೀಲನೆಗಾಗಿ ಇಡಲಾಗಿದೆ. ಇಚ್ಛೆಯುಳ್ಳವರು ಕಛೇರಿ ವೇಳೆಯಲ್ಲಿ ಅಲ್ಲಿನ ಪೊಲೀಸ್ ಉಪಾಧೀಕ್ಷಕರು ರವರನ್ನು ಸಂಪರ್ಕಿಸಿ, ಪರಿಶೀಲನೆ ಮಾಡಿ ಹರಾಜಿನಲ್ಲಿ ಭಾಗವಹಿಸಿ ಹಳೆಯ ಮರದ ತುಂಡುಗಳನ್ನು ಕೊಳ್ಳಬಹುದು.

ಪೊಲೀಸ್ ಅಧೀಕ್ಷಕರು,
ಪಿ.ಡಿ.ಎಂ.ಎಸ್. ಯಲಹಂಕ, ಬೆಂಗಳೂರು

**ಟೆಂಡರ್ ಫಾರಂ ನ ನಮೂನೆ**

**ಹಳೆಯ ಮರ ಮಟ್ಟು ಇತ್ಯಾದಿ ಟೆಂಡರ್**

ಗೆ: ಪೊಲೀಸ್ ಅಧೀಕ್ಷಕರು,
ಪಿ.ಡಿ.ಎಂ.ಎಸ್, ಯಲಹಂಕ,
ಬೆಂಗಳೂರು–63

ಮಾನ್ಯರೇ,

ತಮ್ಮ ಕಛೇರಿಯ ಅಧಿಸೂಚನೆ ಸಂಖ್ಯೆ:––––––––––––––––––––––––––––––––––––––––––– ತಾ: –––––––––––––ರಲ್ಲಿ ತಿಳಿಸಿದ ಪ್ರಕಾರ ಹಳೆಯ ಮರಮಟ್ಟು ಇತ್ಯಾದಿಗಳನ್ನು ರೂ.–––––––––––––––––––ಗೆ (ಅಕ್ಷರಗಳಲ್ಲಿ ರೂಪಾಯಿ––––––––––––––––––––––––––––––––––––––––––––––––––––––––––––––) ಖರೀದಿಸಲು ಒಪ್ಪಿರುತ್ತೇನೆ.

ಸ್ಥಳ : ತಮ್ಮ ವಿಶ್ವಾಸಿ

ತಾ : ವಿಳಾಸ :

ಪೊಲೀಸ್ ಅಧೀಕ್ಷಕರು,
ಪಿ.ಡಿ.ಎಂ.ಎಸ್. ಯಲಹಂಕ, ಬೆಂಗಳೂರು.

ಪಿ.ಆರ್. 648

**ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ನಿರ್ದೇಶಕರ ಕಛೇರಿ,**
**ಸರ್ಕಾರಿ ಕೇಂದ್ರ ಮುದ್ರಣಾಲಯ, ಆರ್.ವಿ. ಕಾಲೇಜ್ ಅಂಚೆ, 8ನೇ ಮೈಲಿ,**
**ಮೈಸೂರು ರಸ್ತೆ, ಬೆಂಗಳೂರು – 560 059**

**ಸಂಕ್ಷಿಪ್ತ ಟೆಂಡರ್ ಪ್ರಕಟಣೆ**

**ಪತ್ರ ಸಂಖ್ಯೆ: ಡಿಪಿಎಸ್/ಪಿಯುಆರ್/ಡಿ–76/2008–09, ದಿನಾಂಕ: 10ನೇ ಡಿಸೆಂಬರ್ 2008**

ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು ಇಲ್ಲಿಗೆ ಇತ್ತೀಚಿನ ಕಾನ್‌ಫಿಗರೇಷನ್ ಹೊಂದಿರುವ 28 ಸಂಖ್ಯೆ ಕಂಪ್ಯೂಟರ್‌ಗಳು ಮತ್ತು ಎ3 ಅಳತೆಯ 2 ಸಂಖ್ಯೆ, ಎ4 ಅಳತೆಯ 10 ಸಂಖ್ಯೆ ಲೇಸರ್ ಪ್ರಿಂಟರ್‌ಗಳನ್ನು ಸರಬರಾಜು ಮಾಡುವ ಬಗ್ಗೆ ಅರ್ಹ ಹಾಗೂ ಅನುಭವ ಹೊಂದಿರುವ ಸಂಸ್ಥೆಗಳಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999 ರಲ್ಲಿ ದ್ವಿಲಕೋಟೆ ಪದ್ಧತಿಯಲ್ಲಿ ಟೆಂಡರ್ ಕರೆಯಲಾಗಿದೆ. ಟೆಂಡರ್ ಅಂದಾಜು ಮೌಲ್ಯ ರೂ. 10.00 ಲಕ್ಷ, ಭದ್ರತಾ ಠೇವಣಿ ರೂ. 20,000/– ಆಗಿರುತ್ತದೆ. ಟೆಂಡರ್ ಫಾರಂಗಳನ್ನು ಮೇಲ್ಕಂಡ ಕಛೇರಿಯಲ್ಲಿ ರೂ. 500/– + ರೂ. 63/– ತೆರಿಗೆ ಪಾವತಿಸಿ ಕಛೇರಿ ವೇಳೆಯಲ್ಲಿ ದಿನಾಂಕ: 10/12/2008 ರಿಂದ ದಿನಾಂಕ: 09/01/2009 ರವರೆಗೆ ಪಡೆಯಬಹುದಾಗಿದೆ. ಮೊಹರಾದ ಟೆಂಡರ್‌ಗಳನ್ನು ದಿನಾಂಕ: 12/01/2009 ರ ಮಧ್ಯಾಹ್ನ 3–00 ಗಂಟೆವರೆಗೆ ಸ್ವೀಕರಿಸಲಾಗುವುದು. ಹಾಗೂ ಲಕೋಟೆ – 1ರ ತಾಂತ್ರಿಕ ಬಿಡ್ ಅನ್ನು ಅದೇ ದಿನ ಮಧ್ಯಾಹ್ನ 3–30 ಗಂಟೆಗೆ ತೆರೆಯಲಾಗುವುದು. ಹೆಚ್ಚಿನ ವಿವರಗಳಿಗೆ ಮೇಲ್ಕಂಡ ಕಛೇರಿಯನ್ನು ಸಂಪರ್ಕಿಸಬಹುದು.

ನಿರ್ದೇಶಕರು

**OFFICE OF THE DIRECTOR OF PRINTING, STATIONERY & PUBLICATIONS,**
**GOVERNMENT CENTRAL PRESS, R.V. COLLEGE POST, 8TH MILE, MYSORE ROAD,**
**BANGALORE - 560 059**

**BRIEF TENDER NOTIFICATION**

**Letter No. DPS/PUR/D-76/2008-09, Dated: 10th December 2008**

Tenders are invited in two covers system in-accordance with KTPP Act 1999, for the supply of 28 Nos Latest Configuration Computers, 2 Nos A3 size, 10 Nos A4 size Laser Printers as described in the Tender Documents. The estimated value of the Tender is Rs. 10 Lakhs. The EMD prescribed is Rs. 20,000/-. The Tender Documents can be obtained from the above Office on application, by paying Rs. 500/- + Rs. 63/- (Tax) in cash from 10/12/2008 to 09/01/2009. The duly filled, Tender Documents should be submitted at the above Office on or before 12/01/2009 before 3-00 pm. The cover-1 Technical Bid will opened at 3-30 pm on the same day.

P.R. 633 Director

**ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ನಿರ್ದೇಶಕರ ಕಛೇರಿ,**
**ಸರ್ಕಾರಿ ಕೇಂದ್ರ ಮುದ್ರಣಾಲಯ, ಆರ್.ವಿ. ಕಾಲೇಜ್ ಅಂಚೆ, 8ನೇ ಮೈಲಿ,**
**ಮೈಸೂರು ರಸ್ತೆ, ಬೆಂಗಳೂರು – 560 059**

**ಸಂಕ್ಷಿಪ್ತ ಟೆಂಡರ್ ಪ್ರಕಟಣೆ**

**ಪತ್ರ ಸಂಖ್ಯೆ: ಡಿಪಿಎಸ್/ಪಿಯುಆರ್/ಡಿ–164/2008–09, ದಿನಾಂಕ: 12ನೇ ಡಿಸೆಂಬರ್ 2008**

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಪ್ರಕಾರ ದ್ವಿಲಕೋಟೆ ಪದ್ಧತಿಯಲ್ಲಿ ಅಧಿಕೃತ ಮಾರಾಟಗಾರರಿಂದ, ಈ ಕೆಳಗೆ ಸೂಚಿಸಿರುವ ಸಾಫ್ಟ್‌ವೇರ್‌ಗಳನ್ನು ಸರಬರಾಜು ಮಾಡಿ ಅಳವಡಿಸಲು, ಟೆಂಡರ್ ಆಹ್ವಾನಿಸಲಾಗಿದೆ. ಟೆಂಡರ್ ಫಾರಂಗಳನ್ನು ಮೇಲೆ ತಿಳಿಸಿದ ಕಛೇರಿಯಲ್ಲಿ ರೂ. 500/– + 63/– ಮಾರಾಟ ತೆರಿಗೆ ಪಾವತಿಸಿ, ದಿನಾಂಕ: 15/12/2008 ರಿಂದ ಪಡೆಯಬಹುದಾಗಿದೆ. ಟೆಂಡರ್ ದಾಸ್ತಾವೇಜನ್ನು ಪಡೆಯಲು ಕೊನೆಯ ದಿನಾಂಕ: 12/01/2009 ಆಗಿರುತ್ತದೆ. ಭರ್ತಿ ಮಾಡಿದ ಮೊಹರಾದ ಟೆಂಡರ್ ದಾಸ್ತಾವೇಜುಗಳನ್ನು ದಿನಾಂಕ: 13/01/2009 ರಂದು ಮಧ್ಯಾಹ್ನ 3–00 ಗಂಟೆ ಒಳಗೆ ಸಲ್ಲಿಸಬೇಕಾಗಿರುತ್ತದೆ. ತಾಂತ್ರಿಕ ಬಿಡ್ ಅನ್ನು ಅದೇ ದಿನ ಮಧ್ಯಾಹ್ನ 3.30 ಕ್ಕೆ ತೆರೆಯಲಾಗುವುದು. ಲಕೋಟೆ – 2 ರ ಆರ್ಥಿಕ ಬಿಡ್ ಅನ್ನು ದಿನಾಂಕ: 17/01/2009 ರ ಮಧ್ಯಾಹ್ನ 3.30ಕ್ಕೆ ಅಥವಾ ಮುಂದೆ ತಿಳಿಸುವ ದಿನಾಂಕದಂದು ತೆರೆಯಲಾಗುವುದು.

| ಷೆಡ್ಯೂಲ್ ಸಂಖ್ಯೆ | ಕ್ರಮ ಸಂಖ್ಯೆ | ಯಂತ್ರೋಪಕರಣಗಳ ವಿವರ | ಪರಿಮಾಣ | ಅಂದಾಜು ಮೌಲ್ಯ ರೂ.ಗಳಲ್ಲಿ | ಭದ್ರತಾ ಠೇವಣಿ |
|---|---|---|---|---|---|
| 1. | 1) | ವಿಂಡೋಸ್ ವಿಸ್ತಾ ಅಪರೇಟಿಂಗ್ ಸಿಸ್ಟಮ್ ಸಾಫ್ಟ್‌ವೇರ್ ಅಲ್ಟ್‌ಮೈಟ್ ಎಡಿಷನ್ | 10 ಸಂ. | 1,10,000/– | 5,000/– |
| 2. | 2) | ಎಂ.ಎಸ್. ಆಫೀಸ್ 2007 ಅಥವಾ ಇತ್ತೀಚಿನ ವರ್ಷನ್ | 10 ಸಂ. | 1,30,000/– | 5,000/– |
| 3. | 3) | ಪೇಜ್ ಮೇಕರ್ – 2 ಯೂಸರ್ ಪ್ಯಾಕೇಜ್ | 02 ಸಂ. | 65,000/– | 5,000/– |
| 4. | 4) | ಅಡೋಬ್ ಫೋಟೋ ಶಾಪ್ | 02 ಸಂ. | 90,000/– | 5,000/– |
| 5. | 5) | ಕೋರಲ್ ಡ್ರಾ | 02 ಸಂ. | 45,000/– | 5,000/– |
| 6. | 6) | ಅಡೋಬ್ ರೀಡರ್ | 01 ಸಂ. | 25,000/– | 5,000/– |
| 7. | 7) | ಟ್ಯಾಲಿ 2 ಯೂಸರ್ | 25 ಸಂ. | 2,50,000/– | 5,000/– |
| 8. | 8) | ನೆಟ್‌ವರ್ಕ್ ಆಂಟಿವೈರಸ್ ಸಿ.ಡಿ. | 10 ಸಂ. | 40,000/– | 5,000/– |

ನಿರ್ದೇಶಕರು

**OFFICE OF THE DIRECTOR OF PRINTING, STATIONERY & PUBLICATIONS, GOVERNMENT CENTRAL PRESS, R.V. COLLEGE POST, 8TH MILE, MYSORE ROAD, BANGALORE - 560 059**

**BRIEF TENDER NOTIFICATION**

**Letter No. DPS/PUR/D-164/2008-09, Dated: 12th December 2008**

Tenders are invited in two covers system in-accordance with KTPP Act 1999, from the authorized dealer for the supply and install, following software shown in the table. The Tender documents can be obtained from the above office on application & buy by paying Rs. 500/- + Rs. 63/- (Tax) in cash from 15/12/2008 to 12/01/2009. The duly filled Tender Documents should be submitted at the above Office on or before 13/01/2009, before 3.00 pm. The cover-1, Technical Bid will be opened at 3.30 pm. on the same day. The cover-2 Financial Bid will be opened at 3.30 pm on 17/01/2009 or later.

| Schedule No. | Sl. No. | Machine Particulars | Quantity | Estimated In Rs. | EMD in Rs. |
|---|---|---|---|---|---|
| 1. | 1) | Windows Vista Operating System Software - Altimate Edition | 10 Nos | 1,10,000/- | 5,000/- |
| 2. | 2) | M.S. Office 2007 or latest version | 10 Nos | 1,30,000/- | 5,000/- |
| 3. | 3) | Pagemaker - User Package | 02 Nos | 65,000/- | 5,000/- |
| 4. | 4) | Adobe Photo shop | 02 Nos | 90,000/- | 5,000/- |
| 5. | 5) | Coral Dra | 02 Nos | 45,000/- | 5,000/- |
| 6. | 6) | Adobe Reader | 01 Nos | 25,000/- | 5,000/- |
| 7. | 7) | Tally - 20 User | 25 Nos | 2,50,000/- | 5,000/- |
| 8. | 8) | Network Antivirus C.D. | 10 Nos | 40,000/- | 5,000/- |

P.R. 634 Director

**FORM - I**

**(See Rule 9)**

**Department of Collegiate Education In Karnataka, Bangalore**

**Office of the:-Sri Jagajoythi Basaveshwara Sahakara Sangha (Neeyamitha) Rajajinagar, Bangalore-10**

**NOTIFICATION**

Smt **KUMUDINI G.S.** working at Selection Grade Lecturer in the English Department of Office of Principal, Basaveshwara College of Commerce, Arts, Science, Rajajinagar, Bangalore-10 is permitted to change his name to **KUMUDINI S. PUTRA**

Signature and Designation of the Appointing Authority

P.D. 177